| | | **<u>ಅಪಘಾತ ಪರಿಹಾರ ಯೋಜನೆ:-</u>**<br>ಈ ಯೋಜನೆಯಡಿ ಖಾಸಗಿ ವಾಣಿಜ್ಯ ಸಾರಿಗೆ ಕಾರ್ಮಿಕರಾದ ಚಾಲಕರು, ನಿರ್ವಾಹಕರು ಮತ್ತು ಕ್ಲೀನರ್‌ಗಳು ಫಲಾನುಭವಿಗಳಾಗಿದ್ದು, ಈ ಕೆಳಕಂಡ ಸೌಲಭ್ಯಗಳನ್ನು ನೀಡಲಾಗುತ್ತಿದೆ.<br><br>(ಅ) **ಅಪಘಾತ ಪರಿಹಾರ ಸೌಲಭ್ಯ** : ಅಪಘಾತದಿಂದ ಮರಣ ಹೊಂದಿದ ಪ್ರಕರಣಗಳಲ್ಲಿ ನಾಮನಿರ್ದೇಶಿತರಿಗೆ ರೂ. 5 ಲಕ್ಷದ ಪರಿಹಾರ, ಸಂಪೂರ್ಣ ಶಾಶ್ವತ ದುರ್ಬಲತೆ ಪ್ರಕರಣಗಳಲ್ಲಿ ರೂ.2 ಲಕ್ಷದ ವರಗೆ ಪರಿಹಾರ ಮತ್ತು ಒಳರೋಗಿಯಾಗಿ ಚಿಕಿತ್ಸೆ ಪಡೆದಲ್ಲಿ ರೂ.1 ಲಕ್ಷದವರೆಗೆ ಚಿಕಿತ್ಸಾ ವೆಚ್ಚದ ಮರುಪಾವತಿ ನೀಡಲಾಗುತ್ತಿದೆ.<br><br>(ಆ) **ಶೈಕ್ಷಣಿಕ ಧನ ಸಹಾಯ :**<br>ಅಪಘಾತದ ಕಾರಣ ನಿಧನರಾದ ಹಾಗೂ ಸಂಪೂರ್ಣ ಶಾಶ್ವತ ದುರ್ಬಲತೆ ಹೊಂದಿದ ಫಲಾನುಭವಿಗಳ ಇಬ್ಬರು ಮಕ್ಕಳಿಗೆ ಪದವಿಪೂರ್ವ ವ್ಯಾಸಂಗದವರೆಗೆ ವಾರ್ಷಿಕ ತಲಾ ರೂ.10,000/-ಗಳ ಶೈಕ್ಷಣಿಕ ಸಹಾಯಧನ ನೀಡಲಾಗುತ್ತಿದೆ.<br><br>**(2) <u>ಅಂಬೇಡ್ಕರ್ ಕಾರ್ಮಿಕ ಸಹಾಯ ಹಸ್ತ ಯೋಜನೆ:-</u>**<br><br>(ಅ) **"ಸ್ಮಾರ್ಟ್ ಕಾರ್ಡ್":-** ಪ್ರಸ್ತುತ ಈ ಯೋಜನೆಯಡಿ 11 ಅಸಂಘಟಿತ ವರ್ಗಗಳಾದ "ಹಮಾಲರು, ಮನೆಗೆಲಸದವರು, ಚಿಂದಿ ಆಯುವವರು, ಟೈಲರ್ಸ್, ಮೆಕ್ಯಾನಿಕ್, ಅಗಸರು, ಅಕ್ಕಸಾಲಿಗರು, ಕಮ್ಮಾರರು, ಕುಂಬಾರರು, ಕ್ಷೌರಿಕರು ಹಾಗೂ ಭಟ್ಟಿ ಕಾರ್ಮಿಕ"ರನ್ನು ನೋಂದಾಯಿಸಿ ಸ್ಮಾರ್ಟ್ ಕಾರ್ಡ್ ವಿತರಿಸಲಾಗುತ್ತಿದೆ.<br><br>(ಆ) **ಕಾರ್ಮಿಕ ಸೇವಾ ಕೇಂದ್ರ :-**<br>ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಕಾಯ್ದೆ 2008ರ ಕಲಂ 9ರನ್ವಯ ಫಲಾನುಭವಿಗಳಲ್ಲಿ ಅಸಂಘಟಿತ ಕಾರ್ಮಿಕರಿಗೆ ಲಭ್ಯವಿರುವ ಎಲ್ಲಾ ಯೋಜನೆಗಳ ಕುರಿತು ಮಾಹಿತಿ ನೀಡಲು, ಯೋಜನೆಗಳ ಸೌಲಭ್ಯಗಳನ್ನು ಪಡೆದುಕೊಳ್ಳಲು ಅವಶ್ಯಕವಿರುವ ದಾಖಲಾತಿಗಳನ್ನು ಸಿದ್ಧಪಡಿಸಲು ಹಾಗೂ ನಿಗಧಿಪಡಿಸಿದ ಅರ್ಜಿ ನಮೂನೆಗಳನ್ನು ಭರ್ತಿ ಮಾಡಿ ಸಂಬಂಧಪಟ್ಟವರಿಗೆ ರವಾನಿಸಲು, ಸಹಾಯ ನೀಡಲು ರಾಜ್ಯದ 169 ತಾಲ್ಲೂಕುಗಳಲ್ಲಿ ಕಾರ್ಮಿಕ ಸೇವಾ ಕೇಂದ್ರಗಳನ್ನು ತೆರೆಯಲಾಗಿದೆ. ಸದರಿ ಕೇಂದ್ರಗಳಲ್ಲಿ ಕರ್ನಾಟಕ ರಾಜ್ಯ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿಯ ಮೂಲಕ ನೇಮಕಗೊಂಡ ಕಾರ್ಮಿಕ ಬಂಧುಗಳು ಕಾರ್ಯನಿರ್ವಹಿಸುತ್ತಿದ್ದಾರೆ. |
|---|---|---|

| | | |
|---|---|---|
| | | (3) (ಅ) **ಪ್ರಧಾನ ಮಂತ್ರಿ ಶ್ರಮಯೋಗಿ ಮಾನ್‌ಧನ್ ಯೋಜನೆ (ಪಿಎಂ-ಎಸ್‌ವೈಎಂ):-** ಕೇಂದ್ರ ಸರ್ಕಾರದ ಈ ಯೋಜನೆಯಡಿ 18 – 40 ವರ್ಷ ವಯೋಮಾನದ ಅಸಂಘಟಿತ ಕಾರ್ಮಿಕರು ನೊಂದಾಯಿಸಿಕೊಂಡು 60 ವರ್ಷ ಪೂರೈಸಿದ ನಂತರ ಮಾಸಿಕ ನಿಶ್ಚಿತ ರೂ.3,000/- ಗಳ ಪಿಂಚಣಿ ಸೌಲಭ್ಯ ಪಡೆಯಬಹುದಾಗಿದೆ. ಈ ಯೋಜನೆಯಡಿ ಫಲಾನುಭವಿಗಳಿಗೆ ಅವರ ವಯಸ್ಸಿನ ಆಧಾರದ ಮೇಲೆ ಮಾಸಿಕ ತಲಾ ರೂ. 55/- ರಿಂದ ರೂ. 200/- ರವರೆಗೆ ವಂತಿಕೆ ಪಾವತಿಸಬೇಕಾಗಿರುತ್ತದೆ ಹಾಗೂ ಕೇಂದ್ರ ಸರ್ಕಾರವು ಸಹ ಸಮಾನಾಂತರ ವಂತಿಕೆಯನ್ನು ಪಾವತಿಸುತ್ತದೆ.<br>(ಆ) **ನ್ಯೂ ಪೆನ್ಷನ್ ಸ್ಕೀಮ್ ಫಾರ್ ಟ್ರೇಡರ್ಸ್ ಅಂಡ್ ಸೆಲ್ಫ್ ಎಂಪ್ಲಾಯ್ಡ್ ಪರ್ಸನ್ಸ್:-**<br>ಕೇಂದ್ರ ಸರ್ಕಾರದ ಈ ಯೋಜನೆಯಡಿ 18 – 40 ವರ್ಷ ವಯೋಮಾನದ ಅಂಗಡಿ ಮಾಲೀಕರು, ಚಿಲ್ಲರೆ ವ್ಯಾಪಾರಿಗ ಳು, ಅಕ್ಕಿ ಗಿರಣಿ ಮಾಲೀಕರು, ಎಣ್ಣೆ ಗಿರಣಿ ಮಾಲೀಕರು, ವರ್ಕ್‌ಶಾಪ್ ಮಾಲೀಕರು, ಕಮಿಷನ್ ಏಜೆಂಟ್ಸ್, ರಿಯಲ್ ಎಸ್ಟೇಟ್‌ನ ಬ್ರೋಕರ್ಸ್, ಸಣ್ಣ ಹೋಟೆಲ್ ಹಾಗೂ ರೆಸ್ಟೋರೆಂಟ್‌ನ ಮಾಲೀಕರು ಹಾಗೂ ಅಂತಹ ಇತರೆ ಸಣ್ಣ ವ್ಯಾಪಾರಗಳಲ್ಲಿ ತೊಡಗಿಸಿಕೊಂಡ ವ್ಯಾಪಾರಿಗಳು/ಲಘು ವ್ಯಾಪಾರಿಗಳು ಹಾಗೂ ಸ್ವಯಂ ಉದ್ಯೋಗಿಗಳು ನೊಂದಾಯಿಸಿಕೊಂಡು 60 ವರ್ಷ ಪೂರೈಸಿದ ನಂತರ ಮಾಸಿಕ ನಿಶ್ಚಿತ ರೂ.3,000/- ಗಳ ಪಿಂಚಣಿ ಸೌಲಭ್ಯ ಪಡೆಯಬಹುದಾಗಿದೆ. ಈ ಯೋಜನೆಯಡಿ ಫಲಾನುಭವಿಗಳಿಗೆ ಅವರ ವಯಸ್ಸಿನ ಆಧಾರದ ಮೇಲೆ ಮಾಸಿಕ ತಲಾ ರೂ. 55/- ರಿಂದ ರೂ. 200/- ರವರೆಗೆ ವಂತಿಕೆ ಪಾವತಿಸಬೇಕಾಗಿರುತ್ತದೆ ಹಾಗೂ ಕೇಂದ್ರ ಸರ್ಕಾರವು ಸಹ ಸಮಾನಾಂತರ ವಂತಿಕೆಯನ್ನು ಪಾವತಿಸುತ್ತದೆ.<br>ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿಯಲ್ಲಿನೋಂದಾಯಿತರಲ್ಲದ ಅಸಂಘಟಿತ ಕಾರ್ಮಿಕರಿಗೆ ಈ ಮಂಡಳಿಯ ಮೂಲಕ ಪ್ರಸ್ತುತ ಯಾವುದೇ ಸೌಲಭ್ಯಗಳನ್ನು ನೀಡುತ್ತಿಲ್ಲ. |
| ಈ) | ನೋಂದಾಯಿತ ಕಾರ್ಮಿಕರಿಗೆ ವಸತಿ ಸೌಲಭ್ಯ ನೀಡಲಾಗುವುದೇ; ಹೌದಾದಲ್ಲಿ, ಈವರೆಗೂ ಎಷ್ಟು ಜನರಿಗೆ ವಸತಿ ಸೌಲಭ್ಯ ನೀಡಲಾಗಿದೆ; (ತಾಲ್ಲೂಕುವಾರು ಸಂಪೂರ್ಣ ಮಾಹಿತಿ ನೀಡುವುದು) | **1. ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿ:**<br>ಈ ಮಂಡಳಿಯ ನೋಂದಾಯಿತ ಕಾರ್ಮಿಕರಿಗೆ ಕಾರ್ಮಿಕ ಗೃಹ ಭಾಗ್ಯ ಸೌಲಭ್ಯದಡಿ ರೂ.2,00,000/- ಗಳವರೆಗೆ ಮನೆ ಕಟ್ಟಲು ಮುಂಗಡ ಹಣ / ಸಾಲ ಸೌಲಭ್ಯ ಒದಗಿಸುವ ಯೋಜನೆಯನ್ನು ರೂಪಿಸಲಾಗಿರುತ್ತದೆ. ಈ ಯೋಜನೆಯಡಿ |

| | | |
|---|---|---|
| | | ವಸತಿ ಇಲಾಖೆಗೆ ಮಂಡಳಿಯಿಂದ ರೂ.76.00 ಕೋಟಿಗಳನ್ನು ಬಿಡುಗಡೆ ಮಾಡಲಾಗಿತ್ತು. ಅದರಂತೆ ಸದರಿ ಇಲಾಖೆಯವರು ಕರ್ನಾಟಕ ಕೊಳಗೇರಿ ಅಭಿವೃದ್ಧಿ ಮಂಡಳಿ ಇವರ ವ್ಯಾಪ್ತಿಯಲ್ಲಿನ ಮಂಡಳಿಯ ನೋಂದಾಯಿತ 5129 ಫಲಾನುಭವಿಗಳಿಗೆ ವಸತಿ ಸೌಲಭ್ಯವನ್ನು ಒದಗಿಸಿರುತ್ತಾರೆ.ಅದರ ಯೋಜನಾ ವಿವರವನ್ನು **ಅನುಬಂಧ-7** ರಲ್ಲಿನೀಡಿದೆ.<br><br>ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿ ಹಾಗೂ ಕರ್ನಾಟಕ ಕಾರ್ಮಿಕರ ಕಲ್ಯಾಣ ಮಂಡಳಿ ವತಿಯಿಂದ ಕಾರ್ಮಿಕರಿಗೆ ವಸತಿ ಸೌಲಭ್ಯ ನೀಡುವ ಯಾವುದೇ ಯೋಜನೆಯನ್ನು ಜಾರಿಗೊಳಿಸುತ್ತಿಲ್ಲ. |
| ಉ) | ವ್ಯವಸಾಯ ಕ್ಷೇತ್ರದ ಕೂಲಿ ಕಾರ್ಮಿಕರು, ಕಾರ್ಮಿಕ ಇಲಾಖೆಯಲ್ಲಿ ನೋಂದಾಯಿಕೊಳ್ಳಲು ಅವಕಾಶವಿದೆಯೇ; | ವ್ಯವಸಾಯ ಕ್ಷೇತ್ರದ ಕೂಲಿ ಕಾರ್ಮಿಕರನ್ನು ಅಸಂಘಟಿತ ಕಾರ್ಮಿಕ ವರ್ಗವೆಂದು ಸರ್ಕಾರವು ಗುರುತಿಸಿರುತ್ತದೆ. ಆದರೆ ಸದರಿ ಕಾರ್ಮಿಕರಿಗೆ ಪ್ರಸ್ತುತ ಯಾವುದೇ ಯೋಜನೆಗಳು ಜಾರಿಯಲ್ಲಿರುವುದಿಲ್ಲವಾದ್ದರಿಂದ ನೋಂದಾಯಿಸುವ ಪ್ರಕ್ರಿಯೆ ಇರುವುದಿಲ್ಲ. ಆದ್ದರಿಂದ ಕಾರ್ಮಿಕ ಇಲಾಖೆಯಲ್ಲಿ ನೋಂದಾಯಿಕೊಳ್ಳಲು ಅವಕಾಶವಿರುವುದಿಲ್ಲ. |
| ಊ) | ನೋಂದಾಯಿಸಿದ್ದಲ್ಲಿ, ಅವರಿಗೆ ಸರ್ಕಾರದಿಂದ ಸಿಗುವ ಸೌಲಭ್ಯಗಳೇನು? | ಪ್ರಶ್ನೆ ಉದ್ಭವಿಸುವುದಿಲ್ಲ |

**ಕಾಇ 150 ಎಲ್ಇಟಿ 2021**

(ಅರಬೈಲ್ ಶಿವರಾಂ ಹೆಬ್ಬಾರ್)
ಕಾರ್ಮಿಕ ಸಚಿವರು

## ಅನುಬಂಧ-1

**(ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 3901)**

**ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿ**

| ಮಂಡಳಿಯಲ್ಲಿ 2007 ರಿಂದ ಫೆಬ್ರವರಿ 2021 ರವರೆಗೆ ನೋಂದಣಿಯಾದ ಕಾರ್ಮಿಕರ ಜಿಲ್ಲಾವಾರು ವಿವರ | | |
|---|---|---|
| ಕ್ರ.ಸಂ | ಜಿಲ್ಲೆ | ನೋಂದಣಿಯಾದ ಕಾರ್ಮಿಕರ ಸಂಖ್ಯೆ |
| 1 | ಬಾಗಲಕೋಟೆ | 59,370 |
| 2 | ಬೆಂಗಳೂರು | 436810 |
| 3 | ಬೆಳಗಾಂ | 144515 |
| 4 | ಬಳ್ಳಾರಿ | 83,276 |
| 5 | ವಿಜಯಪುರ | 93,566 |
| 6 | ಬೀದರ್ | 151891 |
| 7 | ಚಾಮರಾಜನಗರ | 38,932 |
| 8 | ಚಿಕ್ಕಬಳ್ಳಾಪುರ | 34,063 |
| 9 | ಚಿಕ್ಕಮಗಳೂರು | 60,290 |
| 10 | ಚಿತ್ರದುರ್ಗ | 71,339 |
| 11 | ದಕ್ಷಿಣ ಕನ್ನಡ | 83,791 |
| 12 | ದಾವಣಗೆರೆ | 1,13,553 |
| 13 | ಧಾರವಾಡ | 88,446 |
| 14 | ಗದಗ | 37,633 |
| 15 | ಕಲಬುರಗಿ | 150473 |
| 16 | ಹಾಸನ | 54,823 |
| 17 | ಹಾವೇರಿ | 90,130 |
| 18 | ಕೊಡಗು | 6,592 |
| 19 | ಕೋಲಾರ | 97,705 |
| 20 | ಕೊಪ್ಪಳ | 62,699 |
| 21 | ಮಂಡ್ಯ | 43,033 |
| 22 | ಮೈಸೂರು | 90,668 |
| 23 | ರಾಮನಗರ | 52,898 |
| 24 | ರಾಯಚೂರು | 45,735 |
| 25 | ಶಿವಮೊಗ್ಗ | 97,600 |
| 26 | ಉತ್ತರ ಕನ್ನಡ | 76,409 |
| 27 | ಉಡುಪಿ | 44,713 |
| 28 | ತುಮಕೂರು | 69,373 |
| 29 | ಯಾದಗಿರಿ | 58,639 |
| | **ಒಟ್ಟು** | **2538965** |
| | **ವಿಶೇಷ ನೋಂದಣಿ ಅಭಿಯಾನ** | **4,20,886** |
| | **ಒಟ್ಟು** | **29,59,851** |

ಅನುಬಂಧ-2

(ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 3901)

| ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿಯಲ್ಲಿ ಸಾರಿಗೆ ಇಲಾಖೆಯಿಂದ ಊರ್ಜಿತ ಚಾಲನ ಪರವಾನಗಿ ಹೊಂದಿದ ಚಾಲಕರ ಜಿಲ್ಲಾವಾರು ವಿವರ | | |
|---|---|---|
| ಕ್ರಸಂ | ಜಿಲ್ಲೆ | ಚಾಲಕರ ಸಂಖ್ಯೆ |
| 1 | ಬಾಗಲಕೋಟೆ | 19015 |
| 2 | ಬಳ್ಳಾರಿ | 25273 |
| 3 | ಬೆಳಗಾವಿ | 46747 |
| 4 | ಬೆಂಗಳೂರು ನಗರ | 286129 |
| 5 | ಬೆಂಗಳೂರು ಗ್ರಾಮಾಂತರ | 16681 |
| 6 | ಬೀದರ್ | 25332 |
| 7 | ಚಾಮರಾಜನಗರ | 9743 |
| 8 | ಚಿಕ್ಕಬಳ್ಳಾಪುರ | 15610 |
| 9 | ಚಿಕ್ಕಮಗಳೂರು | 10711 |
| 10 | ಚಿತ್ರದುರ್ಗ | 13457 |
| 11 | ದಕ್ಷಿಣ-ಕನ್ನಡ | 50475 |
| 12 | ದಾವಣಗೆರೆ | 20553 |
| 13 | ಧಾರವಾಡ | 14199 |
| 14 | ಗದಗ | 13822 |
| 15 | ಹಾಸನ | 34001 |
| 16 | ಹಾವೇರಿ | 10681 |
| 17 | ಕಲಬುರಗಿ | 27470 |
| 18 | ಕೊಡಗು | 7326 |
| 19 | ಕೋಲಾರ | 28757 |
| 20 | ಕೊಪ್ಪಳ | 8488 |
| 21 | ಮಂಡ್ಯ | 27992 |
| 22 | ಮೈಸೂರು | 39460 |
| 23 | ರಾಮನಗರ | 15903 |
| 24 | ರಾಯಚೂರು | 15343 |
| 25 | ಶಿವಮೊಗ್ಗ | 22213 |
| 26 | ತುಮಕೂರು | 27383 |
| 27 | ಉಡುಪಿ | 22323 |
| 28 | ಉತ್ತರ-ಕನ್ನಡ | 15714 |
| 29 | ವಿಜಯಪುರ | 34008 |
| 30 | ಯಾದಗಿರಿ | 7291 |
| | ಒಟ್ಟು | **912100** |
| ಸರ್ಕಾರಿ ಇಲಾಖೆಗಳು, ಮಂಡಳಿಗಳು ಹಾಗೂ ಸಾರ್ವಜನಿಕ ಉದ್ದಿಮೆಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಚಾಲಕರನ್ನು ಹೊರತುಪಡಿಸಿ | | 71539 |
| | ಒಟ್ಟು | **840561** |

## ಅನುಬಂಧ–03

**(ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 3901)**

**ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿಯು ಅನುಷ್ಠಾನಗೊಳಿಸುತ್ತಿರವ ಅಂಬೇಡ್ಕರ್ ಕಾರ್ಮಿಕ ಸಹಾಯ ಹಸ್ತ ಯೋಜನೆಯಡಿ11 ವರ್ಗಗಳ ಅಸಂಘಟಿತ ಕಾರ್ಮಿಕರನ್ನು ನೋಂದಾಯಿಸಿದ ವಿವರ**

| ಕ್ರ.ಸಂ | ಜಿಲ್ಲೆ | ಒಟ್ಟು |
|---|---|---|
| 1 | ಬಾಗಲಕೋಟೆ | 4324 |
| 2 | ಬೆಂಗಳೂರು ನಗರ | 19119 |
| 3 | ಬೆಂಗಳೂರು ಗ್ರಾಮಾಂತರ | 569 |
| 4 | ಬೆಳಗಾವಿ | 11398 |
| 5 | ಬಳ್ಳಾರಿ | 4767 |
| 6 | ಬೀದರ್ | 2260 |
| 7 | ವಿಜಯಪುರ | 3396 |
| 8 | ಚಾಮರಾಜನಗರ | 3283 |
| 9 | ಚಿಕ್ಕಬಳ್ಳಾಪುರ | 1706 |
| 10 | ಚಿಕ್ಕಮಗಳೂರು | 2870 |
| 11 | ಚಿತ್ರದುರ್ಗ | 4949 |
| 12 | ದಕ್ಷಿಣ–ಕನ್ನಡ | 4738 |
| 13 | ದಾವಣಗೆರೆ | 6972 |
| 14 | ಧಾರವಾಡ | 2662 |
| 15 | ಗದಗ | 2947 |
| 16 | ಕಲಬುರಗಿ | 2562 |
| 17 | ಹಾಸನ | 2691 |
| 18 | ಹಾವೇರಿ | 3176 |
| 19 | ಕೊಡಗು | 3261 |
| 20 | ಕೋಲಾರ | 1372 |
| 21 | ಕೊಪ್ಪಳ | 3760 |
| 22 | ಮಂಡ್ಯ | 5011 |
| 23 | ಮೈಸೂರು | 6491 |
| 24 | ರಾಯಚೂರು | 4343 |
| 25 | ರಾಮನಗರ | 1639 |
| 26 | ಶಿವಮೊಗ್ಗ | 5002 |
| 27 | ತುಮಕೂರು | 5222 |
| 28 | ಉಡುಪಿ | 2383 |
| 29 | ಉತ್ತರ–ಕನ್ನಡ | 38755 |
| 30 | ಯಾದಗಿರಿ | 1891 |
| | **TOTAL** | **163519** |

**ಅನುಬಂಧ-04**

**(ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 3901)**

| ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿಯ ವತಿಯಿಂದ ಕ್ಷೌರಿಕರು/ಅಗಸ ವೃತ್ತಿಯಲ್ಲಿ ತೊಡಗಿರುವ ಕಾರ್ಮಿಕರ ಅರ್ಜಿಗಳನ್ನು ಸ್ವೀಕರಿಸಲಾದ ಜಿಲ್ಲಾವಾರು ಮಾಹಿತಿ (15-08-2020 ರವರೆಗೆ) | | | | |
|---|---|---|---|---|
| ಕ್ರ.ಸಂ | ಜಿಲ್ಲೆ | ಕ್ಷೌರಿಕ | ಅಗಸ | ಒಟ್ಟು |
| 1 | ಬಾಗಲಕೋಟೆ | 2417 | 1072 | 3489 |
| 2 | ಬಳ್ಳಾರಿ | 3075 | 7495 | 10570 |
| 3 | ಬೆಳಗಾವಿ | 5667 | 2788 | 8455 |
| 4 | ಬೆಂಗಳೂರು ಗ್ರಾಮಾಂತರ | 1324 | 1166 | 2490 |
| 5 | ಬೆಂಗಳೂರು ನಗರ | 6071 | 6007 | 12078 |
| 6 | ಬೀದರ್ | 1937 | 1944 | 3881 |
| 7 | ಚಾಮರಾಜನಗರ | 1057 | 2950 | 4007 |
| 8 | ಚಿಕ್ಕಬಳ್ಳಾಪುರ | 2261 | 3012 | 5273 |
| 9 | ಚಿಕ್ಕಮಗಳೂರು | 976 | 516 | 1492 |
| 10 | ಚಿತ್ರದುರ್ಗ | 1785 | 3660 | 5445 |
| 11 | ದಕ್ಷಿಣ-ಕನ್ನಡ | 992 | 345 | 1337 |
| 12 | ದಾವಣಗೆರೆ | 1650 | 2571 | 4221 |
| 13 | ಧಾರವಾಡ | 2257 | 2191 | 4448 |
| 14 | ಗದಗ | 1999 | 1240 | 3239 |
| 15 | ಹಾಸನ | 1765 | 1937 | 3702 |
| 16 | ಹಾವೇರಿ | 2200 | 2381 | 4581 |
| 17 | ಕಲಬುರಗಿ | 3761 | 2250 | 6011 |
| 18 | ಕೊಡಗು | 395 | 238 | 633 |
| 19 | ಕೋಲಾರ | 2509 | 2449 | 4958 |
| 20 | ಕೊಪ್ಪಳ | 2382 | 2363 | 4745 |
| 21 | ಮಂಡ್ಯ | 2311 | 4089 | 6400 |
| 22 | ಮೈಸೂರು | 3294 | 5147 | 8441 |
| 23 | ರಾಯಚೂರು | 2745 | 5604 | 8349 |
| 24 | ರಾಮನಗರ | 1045 | 1373 | 2418 |
| 25 | ಶಿವಮೊಗ್ಗ | 1570 | 883 | 2453 |
| 26 | ತುಮಕೂರು | 2596 | 4582 | 7178 |
| 27 | ಉಡುಪಿ | 1048 | 368 | 1416 |
| 28 | ಉತ್ತರ-ಕನ್ನಡ | 986 | 685 | 1671 |
| 29 | ವಿಜಯಪುರ | 3207 | 1469 | 4676 |
| 30 | ಯಾದಗಿರಿ | 1538 | 2007 | 3545 |
| ಒಟ್ಟು | | **66820** | **74782** | **141602** |

## ಅನುಬಂಧ-5

**(ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 3901)**

**ಕರ್ನಾಟಕ ಕಾರ್ಮಿಕ ಕಲ್ಯಾಣ ಮಂಡಳಿಯಲ್ಲಿ ಸಂಘಟಿತ ಕಾರ್ಮಿಕರ ಜಿಲ್ಲಾವಾರು ಮಾಹಿತಿ**

| ಕ್ರಮ ಸಂಖ್ಯೆ | ಜಿಲ್ಲೆಯ ಹೆಸರು | ಕಾರ್ಮಿಕರ ಸಂಖ್ಯೆ |
|---|---|---|
| 1 | ಬೆಂಗಳೂರು ನಗರ | 3358067 |
| 2 | ಬೆಂಗಳೂರು ರೂರಲ್ | 105424 |
| 3 | ಬೆಳಗಾಂ | 46170 |
| 4 | ಬಳ್ಳಾರಿ | 45713 |
| 5 | ಬೀದರ್ | 5037 |
| 6 | ಬಾಗಲಕೋಟೆ | 13396 |
| 7 | ವಿಜಯಪುರ | 13881 |
| 8 | ಚಿಕ್ಕಮಗಳೂರು | 12611 |
| 9 | ಚಾಮರಾಜನಗರ | 5511 |
| 10 | ಚಿತ್ರದುರ್ಗ | 5661 |
| 11 | ಚಿಕ್ಕಬಳ್ಳಾಪುರ | 10751 |
| 12 | ದಾವಣಗೆರೆ | 16153 |
| 13 | ದಕ್ಷಿಣ ಕನ್ನಡ | 69183 |
| 14 | ಧಾರವಾಡ | 50632 |
| 15 | ಗದಗ್ | 3782 |
| 16 | ಕಲ್ಬುರ್ಗಿ | 17616 |
| 17 | ಹಾವೇರಿ | 7969 |
| 18 | ಹಾಸನ | 22944 |
| 19 | ಕೊಡಗು | 10512 |
| 20 | ಕೋಲಾರ | 31393 |
| 21 | ಕೊಪ್ಪಳ | 4958 |
| 22 | ಮೈಸೂರು | 93653 |
| 23 | ಮಂಡ್ಯ | 19889 |
| 24 | ರಾಮನಗರ | 40624 |
| 25 | ರಾಯಚೂರು | 7379 |
| 26 | ಶಿವಮೊಗ್ಗ | 27965 |
| 27 | ತುಮಕೂರು | 34631 |
| 28 | ಉಡುಪಿ | 37452 |
| 29 | ಉತ್ತರ ಕನ್ನಡ | 7999 |

## ಅನುಬಂಧ-6

**(ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 3901)**

**ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿವತಿಯಿಂದ ಫಲಾನುಭವಿಗಳಿಗೆ ಸಿಗುವ ಸೌಲಭ್ಯಗಳು**

1. ಪಿಂಚಣಿ ಸೌಲಭ್ಯ: ಮೂರು ವರ್ಷ ಸದಸ್ಯತ್ವದೊಂದಿಗೆ 60 ವರ್ಷ ಪೂರೈಸಿದ ಫಲಾನುಭವಿಗೆ ಮಾಸಿಕ ರೂ.2,000/-
2. ಕುಟುಂಬ ಪಿಂಚಣಿ ಸೌಲಭ್ಯ: ಮೃತ ಪಿಂಚಣಿದಾರರ ಪತಿ / ಪತ್ನಿ ಮಾಸಿಕ ರೂ.1000/-
3. ದುರ್ಬಲತೆ ಪಿಂಚಣಿ: ನೋಂದಾಯಿತ ಫಲಾನುಭವಿಯು ಖಾಯಿಲೆಗಳಿಂದ ಅಥವಾ ಕಟ್ಟಡ ಕಾಮಗಾರಿಗಳ ಅಪಘಾತದಿಂದ ಶಾಶ್ವತ/ಭಾಗಶಃ ಅಂಗವಿಕಲತೆ ಹೊಂದಿದ್ದರೆ ಮಾಸಿಕ ರೂ.2,000/- ಪಿಂಚಣಿ ಹಾಗೂ ಶೇಕಡವಾರು ದುರ್ಬಲತೆಯನ್ನಾಧರಿಸಿ ರೂ.2,00,000/- ದವರೆಗೆ ಅನುಗ್ರಹ ರಾಶಿ ಸಹಾಯಧನ.
4. ಕನ್ನಡಕ, ಶ್ರವಣಯಂತ್ರ, ಕೃತಕ ಕೈಕಾಲು ಮತ್ತು ಗಾಲಿ ಕುರ್ಚಿಮರುಪಾವತಿ ಸೌಲಭ್ಯ.
5. ಟ್ರೈನಿಂಗ್-ಕಮ್-ಟೂಲ್‌ಕಿಟ್‌ಸೌಲಭ್ಯ (ಶ್ರಮ ಸಾಮರ್ಥ್ಯ) : ರೂ.30,000/- ವರೆಗೆ
6. ಶ್ರಮ ಸಂಸಾರ ಸಾಮರ್ಥ್ಯ ತರಬೇತಿ ಸೌಲಭ್ಯ: ನೋಂದಾಯಿತ ಫಲಾನುಭವಿಯ ಅವಲಂಭಿತರಿಗೆ
7. ವಸತಿ ಸೌಲಭ್ಯ (ಕಾರ್ಮಿಕ ಗೃಹ ಭಾಗ್ಯ): ರೂ.2,00,000/- ದವರೆಗೆ ಮುಂಗಡ ಸೌಲಭ್ಯ
8. ಹೆರಿಗೆ ಸೌಲಭ್ಯ (ತಾಯಿ ಲಕ್ಷ್ಮೀ ಬಾಂಡ್): ಮಹಿಳಾ ಫಲಾನುಭವಿಯ ಮೊದಲ ಎರಡು ಮಕ್ಕಳಿಗೆ ಹೆಣ್ಣು ಮಗುವಿನ ಜನನಕ್ಕೆ ರೂ. 30,000/- ಮತ್ತು ಗಂಡು ಮಗುವಿನ ಜನನಕ್ಕೆ ರೂ.20,000/-
9. ಶಿಶು ಪಾಲನಾ ಸೌಲಭ್ಯ:
10. ಅಂತ್ಯಕ್ರಿಯೆ ವೆಚ್ಚ : ರೂ.4,000/- ಹಾಗೂ ಅನುಗ್ರಹ ರಾಶಿ ರೂ.50,000/-ಸಹಾಯಧನ
11. ಶೈಕ್ಷಣಿಕ ಸಹಾಯಧನ (ಕಲಿಕೆ ಭಾಗ್ಯ): ಫಲಾನುಭವಿಯ ಇಬ್ಬರು ಮಕ್ಕಳ ವಿದ್ಯಾಭ್ಯಾಸಕ್ಕಾಗಿ:

| ಕ್ರ.ಸಂ | ತರಗತಿ (ಉತ್ತೀರ್ಣಕ್ಕೆ) | ವಾರ್ಷಿಕ ಸಹಾಯ ಧನ | |
|---|---|---|---|
| | | ಗಂಡು | ಹೆಣ್ಣು |
| I. | ನರ್ಸರಿ | 3,000 | 4,000 |
| II. | 1 ರಿಂದ 4ನೇ ತರಗತಿ | 3,000 | 4,000 |
| III. | 5 ರಿಂದ 8ನೇ ತರಗತಿ | 5,000 | 6,000 |
| IV. | 9 ಹಾಗೂ 10ನೇ ತರಗತಿ | 10,000 | 11,000 |
| V. | ಪ್ರಥಮ ಪಿಯುಸಿ ಮತ್ತು ದ್ವಿತೀಯ ಪಿ.ಯು.ಸಿ | 10,000 | 14,000 |
| VI. | ಐಟಿಐ | 12,000 | 15,000 |
| VII. | ಪದವಿ ಪ್ರತಿ ವರ್ಷಕ್ಕೆ | 15,000 | 20,000 |
| VIII. | ಸ್ನಾತಕೋತ್ತರ ಪದವಿ ಸೇರ್ಪಡೆಗೆ | 20,000 | 20,000 |
| | ಮತ್ತು ಪ್ರತಿ ವರ್ಷಕ್ಕೆ | 20,000 | 25,000 |
| IX. | ಇಂಜಿನಿಯರಿಂಗ್ ಕೋರ್ಸ್ ಬಿಇ/ ಬಿ.ಟೆಕ್ ಸೇರ್ಪಡೆಗೆ | 25,000 | 25,000 |
| | ಮತ್ತು ಪ್ರತಿ ವರ್ಷಕ್ಕೆ | 25,000 | 30,000 |
| X. | ವೈದ್ಯಕೀಯ ಕೋರ್ಸ್‌ಗೆ ಸೇರ್ಪಡೆಗೆ | 30,000 | 30,000 |
| | ಮತ್ತು ಪ್ರತಿ ವರ್ಷಕ್ಕೆ | 40,000 | 50,000 |
| XI. | ಡಿಪ್ಲೋಮಾ | 15,000 | 20,000 |
| XII. | ಎಂ.ಟೆಕ್ / ಎಂ.ಇ | 30,000 | 35,000 |
| XIII. | ಎಂ.ಡಿ (ವೈದ್ಯಕೀಯ) | 45,000 | 55,000 |
| XIV. | ಪಿಹೆಚ್‌ಡಿ (ಪ್ರತಿ ವರ್ಷಕ್ಕೆ) ಗರಿಷ್ಠ 03 ವರ್ಷ | 25,000 | 30,000 |

12. **ವೈದ್ಯಕೀಯ ಸಹಾಯಧನ (ಕಾರ್ಮಿಕ ಆರೋಗ್ಯ ಭಾಗ್ಯ):** ನೋಂದಾಯಿತ ಫಲಾನುಭವಿ ಹಾಗೂ ಅವರ ಅವಲಂಭಿತರಿಗೆ **ರೂ.300/- ರಿಂದ ರೂ.10,000/-ವರೆಗೆ**
13. **ಅಪಘಾತ ಪರಿಹಾರ:** ಮರಣ ಹೊಂದಿದ್ದಲ್ಲಿ **ರೂ.5,00,000/-**, ಸಂಪೂರ್ಣ ಶಾಶ್ವತ ದುರ್ಬಲತೆಯಾದಲ್ಲಿ **ರೂ.2,00,000/- ಮತ್ತು** ಭಾಗಶಃ ಶಾಶ್ವತ ದುರ್ಬಲತೆಯಾದಲ್ಲಿ **ರೂ.1,00,000/-**
14. **ಪ್ರಮುಖ ವೈದ್ಯಕೀಯ ವೆಚ್ಚ ಸಹಾಯಧನ (ಕಾರ್ಮಿಕ ಚಿಕಿತ್ಸಾ ಭಾಗ್ಯ):** ಹೃದ್ರೋಗ, ಕಿಡ್ನಿ ಜೋಡಣೆ, ಕ್ಯಾನ್ಸರ್ ಶಸ್ತ್ರಚಿಕಿತ್ಸೆ, ಕಣ್ಣಿನ ಶಸ್ತ್ರಚಿಕಿತ್ಸೆ, ಪಾರ್ಶ್ವವಾಯು, ಮೂಳೆ ಶಸ್ತ್ರಚಿಕಿತ್ಸೆ, ಗರ್ಭಕೋಶ ಶಸ್ತ್ರಚಿಕಿತ್ಸೆ, ಅಸ್ತಮ ಚಿಕಿತ್ಸೆ, ಗರ್ಭಪಾತ ಪ್ರಕರಣಗಳು, ಪಿತ್ತಕೋಶದ ತೊಂದರೆಗೆ ಸಂಬಂಧಿತ ಚಿಕಿತ್ಸೆ, ಮೂತ್ರ ಪಿಂಡದಲ್ಲಿನ ಕಲ್ಲು ತೆಗೆಯುವ ಚಿಕಿತ್ಸೆ, ಮೆದುಳಿನ ರಕ್ತಸ್ರಾವದ ಚಿಕಿತ್ಸೆ, ಅಲ್ಸರ್ ಚಿಕಿತ್ಸೆ, ಡಯಾಲಿಸಿಸ್ ಚಿಕಿತ್ಸೆ, ಕಿಡ್ನಿ ಶಸ್ತ್ರಚಿಕಿತ್ಸೆ, ಇ.ಎನ್.ಟಿ. ಚಿಕಿತ್ಸೆ ಮತ್ತು ಶಸ್ತ್ರಚಿಕಿತ್ಸೆ, ನರರೋಗ ಶಸ್ತ್ರಚಿಕಿತ್ಸೆ, ವ್ಯಾಸ್ಕ್ಯೂಲರ್ ಶಸ್ತ್ರಚಿಕಿತ್ಸೆ, ಅನ್ನನಾಳದ ಚಿಕಿತ್ಸೆ ಮತ್ತು ಶಸ್ತ್ರಚಿಕಿತ್ಸೆ, ಕರುಳಿನ ಶಸ್ತ್ರಚಿಕಿತ್ಸೆ, ಸ್ತನ ಸಂಬಂಧಿತ ಚಿಕಿತ್ಸೆ ಮತ್ತು ಶಸ್ತ್ರಚಿಕಿತ್ಸೆ, ಹರ್ನಿಯ ಶಸ್ತ್ರಚಿಕಿತ್ಸೆ, ಅಪೆಂಡಿಕ್ಸ್ ಶಸ್ತ್ರಚಿಕಿತ್ಸೆ, ಮೂಳೆ ಮುರಿತ/ಡಿಸ್‌ಲೊಕೇಶನ್ ಚಿಕಿತ್ಸೆ, ಇತರೆ ಔಧ್ಯೋಗಿಕ ಖಾಯಿಲೆಗಳ ಚಿಕಿತ್ಸೆಗಳಿಗೆ **ರೂ.2,00,000/-**ವರೆಗೆ
15. **ಮದುವೆ ಸಹಾಯಧನ (ಗೃಹ ಲಕ್ಷ್ಮೀ ಬಾಂಡ್):** ಫಲಾನುಭವಿ ಅಥವಾ ಅವರ ಇಬ್ಬರು ಮಕ್ಕಳ ಮದುವೆಗೆ ತಲಾ ರೂ.50,000/-
16. **LPG ಸಂಪರ್ಕ ಸೌಲಭ್ಯ (ಕಾರ್ಮಿಕ ಅನಿಲ ಭಾಗ್ಯ):** ಅನಿಲ ಸಂಪರ್ಕದೊಂದಿಗೆಎರಡು ಬರ್ನರ್ ಸ್ಟೌವ್
17. **ಬಿಎಂಟಿಸಿ ಬಸ್ ಪಾಸ್ ಸೌಲಭ್ಯ:** ಬೆಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಯಲ್ಲಿ ಕೆಲಸ ಮಾಡುತ್ತಿರುವಂತಹ / ವಾಸಸ್ಥಳದಿಂದ ಬೆಂಗಳೂರಿಗೆ ಪ್ರಯಾಣಿಸುವ ನೋಂದಾಯಿತ ಕಟ್ಟಡ ಕಾರ್ಮಿಕರಿಗೆ
18. **ಕೆಎಸ್‌ಆರ್‌ಟಿಸಿ ಬಸ್ ಪಾಸ್‌ನ ಸೌಲಭ್ಯ:** ರಾಜ್ಯದಾದ್ಯಂತ ವಿದ್ಯಾಭ್ಯಾಸದಲ್ಲಿ ತೊಡಗಿರುವ ನೋಂದಾಯಿತ ಕಾರ್ಮಿಕರ ಇಬ್ಬರು ಮಕ್ಕಳಿಗೆ (ಈ ಯೋಜನೆಯನ್ನು ಜಾರಿಗೊಳಿಸಲಾಗುತ್ತಿದೆ)
19. **ತಾಯಿ ಮಗು ಸಹಾಯ ಹಸ್ತ:** ಮಹಿಳಾ ಫಲಾನುಭವಿಯು ಮಗುವಿಗೆ ಜನ್ಮ ನೀಡಿದ ಸಂದರ್ಭದಲ್ಲಿ ಆಕೆಯ ಮಗುವಿನ ಶಾಲಾ ಪೂರ್ವ ಶಿಕ್ಷಣ ಮತ್ತು ಪೌಷ್ಠಿಕತೆಗಾಗಿ ಮಗುವಿಗೆ ಮೂರು ವರ್ಷಗಳು ತುಂಬುವವರೆಗೆ ವಾರ್ಷಿಕ **ರೂ.6,000/-** ಗಳ ಸಹಾಯಧನ.

# ಕರ್ನಾಟಕ ಸರ್ಕಾರ

ಸಂಖ್ಯೆ: ಕಾಇ 145 ಎಲ್‌ಇಟಿ 2021

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸಸೌಧ,
ಬೆಂಗಳೂರು, ದಿನಾಂಕ: 20/04/2021

**ಇವರಿಂದ:**
ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ,
ಕಾರ್ಮಿಕ ಇಲಾಖೆ,
ವಿಕಾಸಸೌಧ, ಬೆಂಗಳೂರು.

**ಇವರಿಗೆ:**
ಕಾರ್ಯದರ್ಶಿ,
ಕರ್ನಾಟಕ ವಿಧಾನ ಸಭೆ
ವಿಧಾನಸೌಧ, ಬೆಂಗಳೂರು.

ಮಾನ್ಯರೆ,

ವಿಷಯ: ಮಾನ್ಯ ವಿಧಾನ ಸಭೆಯ ಸದಸ್ಯರಾದ ಶ್ರೀ ಹ್ಯಾರಿಸ್ (ಶಾಂತಿನಗರ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 3641ಕ್ಕೆ ಉತ್ತರ ಸಲ್ಲಿಸುವ ಕುರಿತು.

*******

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನ ಸಭೆಯ ಸದಸ್ಯರಾದ ಶ್ರೀ ಹ್ಯಾರಿಸ್ (ಶಾಂತಿನಗರ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 3641ಕ್ಕೆ ಉತ್ತರದ 20 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಮುಂದಿನ ಸೂಕ್ತ ಕ್ರಮಕ್ಕಾಗಿ ತಮಗೆ ಕಳುಹಿಸಿಕೊಡಲು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮ ವಿಶ್ವಾಸಿ,

(ಪ್ರದೀಪ್ ಕುಮಾರ್ ಬಿ.ಎಸ್)
ಸರ್ಕಾರದ ಅಧೀನ ಕಾರ್ಯದರ್ಶಿ,
ಕಾರ್ಮಿಕ ಇಲಾಖೆ.

# ಕರ್ನಾಟಕ ವಿಧಾನ ಸಭೆ

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ 3641
2. ಮಾನ್ಯ ಸದಸ್ಯರ ಹೆಸರು ಶ್ರೀ ಹ್ಯಾರಿಸ್, ಎನ್.ಎ (ಶಾಂತಿನಗರ)
3. ಉತ್ತರಿಸಬೇಕಾದ ದಿನಾಂಕ 25/03/2021
4. ಉತ್ತರಿಸುವವರು ಮಾನ್ಯ ಕಾರ್ಮಿಕ ಸಚಿವರು

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿರುವ ವಿವಿಧ ವರ್ಗಗಳ ಕಾರ್ಮಿಕರುಗಳ ಸ್ಥಿತಿಗತಿಗಳ ಸುಧಾರಣೆಗಾಗಿ ಸರ್ಕಾರವು ಪರಿಣಾಮಕಾರಿಯಾಗಿ ಮತ್ತು ಫಲಾನುಭವಿಗಳಿಗೆ ಸರಳ ಮತ್ತು ಸುಲಭ ಸಾಧ್ಯವಾಗಿ ತಲುಪುವ ಯೋಜನಾನುಷ್ಠಾನಗಳ ಪ್ರಗತಿಯ ವಿವರಗಳೇನು; | ಇಲಾಖೆಯ ಅಧೀನದಲ್ಲಿ ಕಾರ್ಯನಿರ್ವಹಿಸುತ್ತಿರುವ ಮೂರು ಮಂಡಳಿಗಳು ಅನುಷ್ಠಾನಗೊಳಿಸುತ್ತಿರುವ ಯೋಜನೆಗಳು ವಿವಿಧ ವರ್ಗಗಳ ಕಾರ್ಮಿಕರ ಸ್ಥಿತಿಗತಿಗಳ ಸುಧಾರಣೆಗೆ ಪರಿಣಾಮಕಾರಿಯಾಗಿ ಮತ್ತು ಫಲಾನುಭವಿಗಳಿಗೆ ಸರಳ ಮತ್ತು ಸುಲಭ ಸಾಧ್ಯವಾಗಿ ತಲುಪುವ ಯೋಜನಾಷ್ಠಾನಗಳ ಪ್ರಗತಿಯ ವಿವರಗಳು ಈ ಕೆಳಗಿನಂತಿವೆ:<br><br>1. **ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿ:**–[ಅಸಂಘಟಿತ ವಲಯದ ಕಾರ್ಮಿಕರು] ಈ ಮಂಡಳಿಯಲ್ಲಿ ನೋಂದಣಿಯಾದ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರಿಗೆ ಹಾಗೂ ಅವರ ಅವಲಂಭಿತರಿಗಾಗಿ 19 ವಿವಿಧ ಕಲ್ಯಾಣ ಮತ್ತು ಸಾಮಾಜಿಕ ಸೌಲಭ್ಯಗಳನ್ನು ರೂಪಿಸಲಾಗಿರುತ್ತದೆ. ಸದರಿ ಯೋಜನೆಗಳು ಸುಲಭವಾಗಿ ತಲುಪುವ ಉದ್ದೇಶದಿಂದ ಈ ಕೆಳಕಂಡಂತೆ ಕ್ರಮವಹಿಸಲಾಗಿದೆ.<br><br>• ಮಂಡಳಿಯಿಂದ ಅರ್ಹ ನೋಂದಾಯಿತ ಕಟ್ಟಡ ಕಾರ್ಮಿಕರಿಗೆ ಇರುವ ವಿವಿಧ ಸೌಲಭ್ಯಗಳನ್ನು ತುರ್ತಾಗಿ ಅನುಮೋದಿಸಿ ನಿಗಧಿತ ಅವಧಿಯೊಳಗೆ ಸಹಾಯಧನವನ್ನು ಒದಗಿಸಲು ಸಂಬಂಧಿಸಿದ ಎಲ್ಲಾ ಸಹಾಯಕ ಕಾರ್ಮಿಕ ಆಯುಕ್ತರಿಗೆ ಮತ್ತು ಕಾರ್ಮಿಕ ಅಧಿಕಾರಿಗಳಿಗೆ ಮಂಜೂರಾತಿ ಅಧಿಕಾರವನ್ನು ವಿಕೇಂದ್ರಿಕರಿಸಲಾಗಿದೆ.<br><br>• ನಿಗಧಿತ ಅವಧಿಯೊಳಗೆ ಸಹಾಯಧನವನ್ನು ಒದಗಿಸಲು ಉದ್ದೇಶಿಸಿ ಕೆನರಾ ಬ್ಯಾಂಕ್ ಹೊಂಬೇಗೌಡನಗರ ಶಾಖೆ ಇಲ್ಲಿ ಎಲ್ಲಾ ಸಹಾಯಕ ಕಾರ್ಮಿಕ ಆಯುಕ್ತರು ಮತ್ತು ಕಾರ್ಮಿಕ ಅಧಿಕಾರಿಗಳ ಹೆಸರಲ್ಲಿ ಪ್ರತ್ಯೇಕವಾದ ಬ್ಯಾಂಕ್ ಅಕೌಂಟ್‌ಗಳನ್ನು ತೆರೆದು ಮುಂಗಡವಾಗಿ ಹಣವನ್ನು ವರ್ಗಾಹಿಸಲಾಗುತ್ತಿದೆ.<br><br>• ಸದರಿ ಬ್ಯಾಂಕ್‌ನಿಂದ ಪ್ರತಿ ದಿನ ಫಲಾನುಭವಿಗಳಿಗೆ ನೆಫ್ಟ್/ ಆರ್.ಟಿ.ಜಿ.ಎಸ್ ಮೂಲಕ ಸಹಾಯಧನವನ್ನು ವರ್ಗಾಯಿಸಲಾಗುತ್ತಿದೆ. ಈ ರೀತಿಖಾತೆಗೆ ಸಹಾಯಧನವು ಜಮೆಯಾದ ಪ್ರಕರಣಗಳಲ್ಲಿ ಯಶಸ್ವಿಗೊಂಡ ಫಲಾನುಭವಿಗಳ ವಿವರ ಮತ್ತು ಯಶಸ್ವಿಯಾಗದೇ ಇರುವ ಫಲಾನುಭವಿಗಳ ವಿವರಗಳನ್ನು ಸಹಾಯಕ ಕಾರ್ಮಿಕ ಆಯುಕ್ತರು ಮತ್ತು ಕಾರ್ಮಿಕ ಅಧಿಕಾರಿಗಳಿಗೆ ಸಲ್ಲಿಸಲಾಗುತ್ತದೆ. |

- ಯಶಸ್ವಿಯಾಗದೇ ಇರುವ ಫಲಾನುಭವಿಗಳ ತಾಂತ್ರಿಕ ದೋಷಗಳನ್ನು ಮತ್ತು ಇತರೆ ಅವಶ್ಯಕತೆ ಇರುವ ದಾಖಲೆಗಳನ್ನು ಸಂಬಂಧಿಸಿದ ಸಹಾಯಕ ಕಾರ್ಮಿಕ ಆಯುಕ್ತರು ಮತ್ತು ಕಾರ್ಮಿಕ ಅಧಿಕಾರಿಗಳು ಪುನಃ ಬ್ಯಾಂಕ್‌ಗೆ ಸಲ್ಲಿಸಿ ಫಲಾನುಭವಿಗಳಿಗೆ ನೇರವಾಗಿ ಬ್ಯಾಂಕ್ ಮೂಲಕ ಸಹಾಯಧನ ಒದಗಿಸಬಹುದಾಗಿದೆ.
- ಪ್ರತಿ ತಿಂಗಳ ಅಂತ್ಯಕ್ಕೆ ಸಂಬಂಧಿಸಿದ ಸಹಾಯಕ ಕಾರ್ಮಿಕ ಆಯುಕ್ತರು, ಕಾರ್ಮಿಕ ಅಧಿಕಾರಿಗಳು ತಮ್ಮ ಕಛೇರಿಯ ಮಾಹಿತಿಯೊಂದಿಗೆ ಸಂಬಂಧಿಸಿದ ಬ್ಯಾಂಕ್‌ಖಾತೆಯ ವಿವರಗಳೊಂದಿಗೆ ಹಾಗೂ ಮಂಡಳಿಯೊಂದಿಗೆ ತಾಳೆ ಮಾಡುವ (Reconciliation) ಕ್ರಮಗಳನ್ನು ಕೈಗೊಳ್ಳಲಾಗುತ್ತಿದೆ.
- ಅರ್ಜಿದಾರರು ಒಂದು ಲಾಗಿನ್ ಐಡಿಯಿಂದ ಒಂದು ನೊಂದಣಿ ಅರ್ಜಿಯನ್ನು ಮಾತ್ರ ಇ-ಸಹಿ ಮೂಲಕ ಸಲ್ಲಿಸಬಹುದಾಗಿದೆ.
- ಸೇವಾ ಸಿಂಧುವಿನಲ್ಲಿ ನೋಂದಣಿಯಾದ (Common Service Centre - CSC) / ಸೆಂಟರ್‌ಗಳಲ್ಲಿ ಒಂದಕ್ಕಿಂತ ಹೆಚ್ಚು ಅರ್ಜಿಗಳು ಒಂದೇ ಲಾಗಿನ್ ಐಡಿ ಮೂಲಕ ಸಲ್ಲಿಸಬಹುದಾಗಿದೆ. ಆದರೆ, ಪ್ರತಿ ಒಂದು ಅರ್ಜಿಗೆ ಸಂಬಂಧಿಸಿದ ಅರ್ಜಿದಾರರು ಆಧಾರ್ ಸಂಖ್ಯೆಗೆ ಲಿಂಕ್‌ಗೊಂಡ ಇ-ಸಹಿ ಕಡ್ಡಾಯವಾಗಿರುತ್ತದೆ. ಸದರಿ ಆಧಾರ್‌ಗೆ ಲಿಂಕ್‌ಗೊಂಡ ಮೊಬೈಲ್ ನಂಬರ್‌ಗೆ ಓಟಿಪಿ ಕಳುಹಿಸಲಾಗುವುದು. ಸದರಿ ಓಟಿಪಿ ನಂಬರ್ ಅನ್ನು ಅರ್ಜಿದಾರರು ನೋಂದಣಿ ಅರ್ಜಿಯನ್ನು ಸಲ್ಲಿಸುವ ಸಮಯದಲ್ಲಿ ತಿಳಿಸುವುದು ಕಡ್ಡಾಯವಾಗಿರುತ್ತದೆ. ಒಂದು ವೇಳೆ ಓಟಿಪಿ ತಿಳಿಸದಿದ್ದಲ್ಲಿ ನೋಂದಣಿ ಪ್ರಕ್ರಿಯೆ ಪೂರ್ಣಗೊಳ್ಳುವುದಿಲ್ಲ.
- ಅಲ್ಲದೆ, ಸಂಬಂಧಿಸಿದ ಕಾರ್ಮಿಕ ನಿರೀಕ್ಷಕರು ತಮ್ಮಲ್ಲಿ ಸ್ವೀಕರಿಸಿದ ನೋಂದಣಿ ಅರ್ಜಿಗಳನ್ನು ಪರಿಶೀಲಿಸಿ ಇ-ಸಹಿ ಇಲ್ಲದೆ ನೋಂದಣಿ ಮಾಡಲು ಅವಕಾಶ ಕಲ್ಪಿಸಲಾಗಿದೆ.
- ಆನ್‌ಲೈನ್ ಮೂಲಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರನ್ನು ನೋಂದಾಯಿಸುವ ಪ್ರಕ್ರಿಯೆ ಜಾರಿಯಲ್ಲಿದ್ದು, ನೋಂದಣಿಗಾಗಿ ಸ್ವೀಕರಿಸಿದ ಅರ್ಜಿಗಳನ್ನು ಸಂಬಂಧಿಸಿದ ಕಾರ್ಮಿಕ ನಿರೀಕ್ಷಕರು 45 ದಿನಗಳೊಳಗಾಗಿ ಖುದ್ದು ಪರಿಶೀಲನೆ ಮಾಡಿ ಸದರಿ ಅರ್ಜಿದಾರರು ಅರ್ಹ ಕಟ್ಟಡ ಕಾರ್ಮಿಕರೆಂದು ಕಂಡು ಬಂದಲ್ಲಿ ಅನುಮೋದನೆ ನೀಡಿ ನೋಂದಣಿ ಮಾಡುತ್ತಾರೆ.
- ಮಂಡಳಿಯ ಫಲಾನುಭವಿಗಳ ನೋಂದಣಿ, ನವೀಕರಣ ಮತ್ತು ಸೌಲಭ್ಯಗಳನ್ನು ಪಡೆಯಲು ತಂತ್ರಾಂಶದ ಮೂಲಕ ಅರ್ಜಿ ಸಲ್ಲಿಸುವ ಸಂದರ್ಭದಲ್ಲಿ ಅರ್ಜಿದಾರರು ಆಧಾರ್

ಲಿಂಕ್‌ಗೆ ಒಳಪಟ್ಟ ಮೊಬೈಲ್ ಸಂಖ್ಯೆಗೆ ಓಟಿಪಿಯನ್ನು ಕಳುಹಿಸಿಕೊಡಲಾಗುವುದು. ಸದರಿ ಓಟಿಪಿ ಸಂಖ್ಯೆಯನ್ನು ಅರ್ಜಿದಾರರು ತಿಳಿಸುವುದನ್ನು ಕಡ್ಡಾಯ ಮಾಡುವುದರ ಮೂಲಕ ದುರುಪಯೋಗವಾಗುವುದನ್ನು ತಡೆಯಲಾಗಿರುತ್ತದೆ.

ಈ ಸೌಲಭ್ಯಗಳಡಿ ಸಾಧಿಸಿರುವ ಪ್ರಗತಿಯ ವಿವರವನ್ನು ಅನುಬಂಧದಲ್ಲಿ ಲಗತ್ತಿಸಿದೆ.

2. ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿ:- ಈ ಮಂಡಳಿಯ ವತಿಯಿಂದ "ಅಸಂಘಟಿತ ಕಾರ್ಮಿಕ"ರಿಗೆ ಸಾಮಾಜಿಕ ಭದ್ರತೆ ಒದಗಿಸಲು ಜಾರಿಗೊಳಿಸುತ್ತಿರುವ ಈ ಕೆಳಕಂಡ ಯೋಜನೆಗಳಡಿ ಸಾಧಿಸಿದ ಪ್ರಗತಿಯ ವಿವರ ಕೆಳಗಿನಂತಿದೆ.

(1) ಕರ್ನಾಟಕ ರಾಜ್ಯ ಖಾಸಗಿ ವಾಣಿಜ್ಯ ಸಾರಿಗೆ ಕಾರ್ಮಿಕರ ಅಪಘಾತ ಪರಿಹಾರ ಯೋಜನೆ:-

ಈ ಯೋಜನೆಯಡಿ ಖಾಸಗಿ ವಾಣಿಜ್ಯ ಸಾರಿಗೆ ಕಾರ್ಮಿಕರಾದ ಚಾಲಕರು, ನಿರ್ವಾಹಕರು ಮತ್ತು ಕ್ಲೀನರ್‌ಗಳು ಫಲಾನುಭವಿಗಳಾಗಿದ್ದು, ವಿತರಿಸಿದ ಸೌಲಭ್ಯಗಳು ಈ ಕೆಳಗಿನಂತಿವೆ.

| ಸೌಲಭ್ಯಗಳು | ಪಡೆದ ಫಲಾನುಭವಿಗಳ ಸಂಖ್ಯೆ | ಸೌಲಭ್ಯದ ಮೊತ್ತ |
|---|---|---|
| ಅಪಘಾತ ಪರಿಹಾರ | 827 | 24,91,18,232 |
| ಶೈಕ್ಷಣಿಕ ಧನ ಸಹಾಯ | 477 | 47,70,000 |

2. ಅಂಬೇಡ್ಕರ್ ಕಾರ್ಮಿಕ ಸಹಾಯ ಹಸ್ತ ಯೋಜನೆ:-

(ಅ) "ಸ್ಮಾರ್ಟ್‌ಕಾರ್ಡ್":- ಯೋಜನೆಯಡಿ 11 ಅಸಂಘಟಿತ ವರ್ಗಗಳ (ಹಮಾಲರು, ಮನೆಗೆಲಸದವರು, ಚಿಂದಿ ಆಯುವವರು, ಟೈಲರ್ಸ್, ಮೆಕ್ಯಾನಿಕ್, ಅಗಸರು, ಅಕ್ಕಸಾಲಿಗರು, ಕಮ್ಮಾರರು, ಕುಂಬಾರರು, ಕ್ಷೌರಿಕರು ಹಾಗೂ ಭಟ್ಟಿ ಕಾರ್ಮಿಕರು) 1,63,519 ಅಸಂಘಟಿತ ಕಾರ್ಮಿಕರನ್ನು ನೊಂದಾಯಿಸಲಾಗಿದ್ದು, ಅದರಲ್ಲಿ 53,672 ಅಸಂಘಟಿತ ಕಾರ್ಮಿಕರಿಗೆ ಸ್ಮಾರ್ಟ್‌ಕಾರ್ಡ್ ವಿತರಿಸಲಾಗಿದೆ.

3. ಕರ್ನಾಟಕ ಕಾರ್ಮಿಕ ಕಲ್ಯಾಣ ಮಂಡಳಿ [ಸಂಘಟಿತ ಕಾರ್ಮಿಕರ ವಲಯ] ಈ ಮಂಡಳಿಯು ಸಂಘಟಿತ ಕಾರ್ಮಿಕರು ಅವರ ಕುಟುಂಬದ ಅವಲಂಬಿತರಿಗಾಗಿ ಕಲ್ಯಾಣ ಯೋಜನೆಗಳನ್ನು ಅನುಷ್ಠಾನಗೊಳಿಸಿದ್ದು, ಮಂಡಳಿಗೆ ವಂತಿಗೆ ಪಾವತಿಸುವ ವಿವಿಧ ಸಂಸ್ಥೆಗಳಲ್ಲಿ ಕೆಲಸ ನಿರ್ವಹಿಸುತ್ತಿರುವ ಸಂಘಟಿತ ಕಾರ್ಮಿಕರು ಮತ್ತು ಅವರ ಕುಟುಂಬದ ಅವಲಂಬಿತರಿಗೆ ವಿವಿಧ ಸೌಲಭ್ಯಗಳನ್ನು ನೀಡಲಾಗುತ್ತಿದೆ. ಈ ಸೌಲಭ್ಯಗಳು ಧನ ಸಹಾಯ ರೂಪದಲ್ಲಿದ್ದು, ಸದರಿ ಧನ ಸಹಾಯವನ್ನು ಫಲಾನುಭವಿಗಳ

| | | |
|---|---|---|
| | | ಬ್ಯಾಂಕ್ ಖಾತೆಗೆ ನೇರವಾಗಿ ಆರ್.ಟಿ.ಜಿ.ಎಸ್ ಮೂಲಕ ಜಮಾ ಮಾಡಲಾಗುತ್ತಿದೆ. |
| ಆ) | ವಲಸೆ ಕಾರ್ಮಿಕರು ಕುಟುಂಬ ಸಮೇತರಾಗಿ ವಲಸೆ ಹೋಗುತ್ತಿದ್ದು, ಅವರುಗಳಿಗೆ ಈ ರಾಜ್ಯದ ಮಹಾನಗರಗಳಲ್ಲಿ ಮತ್ತಿತರ ಕಡೆಗಳಲ್ಲಿ ಮೂಲಭೂತ ಸೌಕರ್ಯಗಳನ್ನು ಒದಗಿಸಿಕೊಡಲು ಸರ್ಕಾರವು ಕೈಗೊಂಡ ಗಂಭೀರ ಮತ್ತು ಪರಿಣಾಮಕಾರಿ ಕ್ರಮಗಳೇನು: | <u>1. ಕರ್ನಾಟಕ ಕಟ್ಟಡ ಮತ್ತುಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿ: [ಅಸಂಘಟಿತ ವಲಯದ ಕಾರ್ಮಿಕರಿಗೆ]</u><br>ವಲಸೆ ಕಾರ್ಮಿಕರು ಮತ್ತು ಅವರ ಕುಟುಂಬದವರ ಅನುಕೂಲಕ್ಕಾಗಿ ಬೆಂಗಳೂರು ನಗರ ಮತ್ತು ಬೆಂಗಳೂರು ಗ್ರಾಮಾಂತರ ಜಿಲ್ಲೆಗಳಲ್ಲಿ ನಾಲ್ಕು ಹಾಗೂ ಮೈಸೂರು, ಶಿವಮೊಗ್ಗ, ಹುಬ್ಬಳ್ಳಿ, ಕಲಬುರಗಿ, ಬಳ್ಳಾರಿ, ಹಾಸನ, ದಾವಣಗೆರೆ, ಗದಗ ಮತ್ತು ಚಾಮರಾಜನಗರ ಜಿಲ್ಲೆಗಳಲ್ಲಿ ತಲಾ ಒಂದರಂತೆ ಸುಸಜ್ಜಿತವಾದ ತಾತ್ಕಾಲಿಕ ವಸತಿ ಗೃಹ ಸೌಲಭ್ಯವನ್ನು ನಿರ್ಮಾಣ ಮಾಡಲು ರಾಜ್ಯದ 2020-21ನೇ ಆಯವ್ಯಯದಲ್ಲಿ ಪ್ರಸ್ತಾಪಿಸಲಾಗಿದೆ. ಆಯವ್ಯಯ ಘೋಷಣೆ ಅನ್ವಯ ವಲಸೆ ಕಾರ್ಮಿಕರ ಅನುಕೂಲಕ್ಕಾಗಿ ತಾತ್ಕಾಲಿಕ ವಸತಿ ಗೃಹಗಳನ್ನು ನಿರ್ಮಾಣ ಮಾಡಲು ಮಂಡಳಿಯಿಂದ ಕ್ರಮ ಕೈಗೊಳ್ಳಲಾಗುತ್ತಿದೆ. |
| ಇ) | ಕಾರ್ಮಿಕ ಇಲಾಖೆಯ ಯೋಜನೆಗಳ ಬಗ್ಗೆ ಬಡ ಮತ್ತು ಅಸಹಾಯಕ ಫಲಾನುಭವಿಗಳಿಗೆ ಮಾಹಿತಿ ಮತ್ತು ಮಾರ್ಗದರ್ಶನ ದೊರಕದೆ ಸರ್ಕಾರದ ಯೋಜನೆಗಳು ಗುರಿ ಸಾಧನೆ ಸಾಧಿಸಲು ಸಾಧ್ಯವಾಗಿತ್ತಿಲ್ಲದಿರುವುದು ನಿಜವೇ; | 1. <u>ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿ</u><br>ಮಂಡಳಿಯು ರೂಪಿಸಿರುವ ಯೋಜನೆಗಳು ಸಮರ್ಪಕವಾಗಿ ನೋಂದಾಯಿತ ಫಲಾನುಭವಿಗಳಿಗೆ ಮತ್ತು ಅವರ ಅವಲಂಬಿತರಿಗಾಗಿ ತಲುಪಿಸುವ ಉದ್ದೇಶದಿಂದ ಈ ಕೆಳಕಂಡ ಮಾಹಿತಿ, ಶಿಕ್ಷಣ ಮತ್ತು ಸಂವಹನ ಕಾರ್ಯಕ್ರಮಗಳನ್ನು ಮಂಡಳಿಯ ವತಿಯಿಂದ ಹಮ್ಮಿಕೊಳ್ಳಲಾಗಿದೆ.<br>• KSRTC/ NEKRTC/ NWKRTC Bus Branding ಜಾಹೀರಾತಿನ ಮೂಲಕ ಪ್ರಚಾರ ಪಡಿಸಲಾಗಿದೆ.<br>• ರಾಜ್ಯ ರಸ್ತೆ ಸಾರಿಗೆ ಸಂಸ್ಥೆಯ ಬಸ್ ನಿಲ್ದಾಣಗಳಲ್ಲಿ ಒಂದು ತಿಂಗಳ ಅವಧಿಗೆ ಶ್ರಾವ್ಯ ಮಾಧ್ಯಮದ ಮೂಲಕ ಪ್ರಚಾರ ಮಾಡಲಾಗಿದೆ.<br>• ಕಟ್ಟಡ ಹಾಗೂ ಇತರೆ ನಿರ್ಮಾಣ ಕಾರ್ಮಿಕರಿಗೆ ಮಂಡಳಿಯ ವತಿಯಿಂದ ಒದಗಿಸಲಾಗುತ್ತಿರುವ ಸೌಲಭ್ಯಗಳ ವಿವರಗಳ ಬಗ್ಗೆ Hoarding ಗಳನ್ನು ಮುದ್ರಿಸಿ ರಾಜ್ಯಾದ್ಯಂತ ಅಳವಡಿಸಲಾಗಿದೆ.<br>• ಕಟ್ಟಡ ಹಾಗೂ ಇತರೆ ನಿರ್ಮಾಣ ಕಾರ್ಮಿಕರಿಗೆ ಮಂಡಳಿಯ ವತಿಯಿಂದ ಒದಗಿಸಲಾಗುತ್ತಿರುವ ಸೌಲಭ್ಯಗಳನ್ನೊಳಗೊಂಡ Bannersಗಳನ್ನು ಮುದ್ರಿಸಿ ಪ್ರತಿ ತಾಲ್ಲೂಕಿಗೆ 8 ರಂತೆ (ಒಟ್ಟು 1920) ಎಲ್ಲಾ ತಾಲ್ಲೂಕು ಕಾರ್ಮಿಕ ಕಛೇರಿಗಳಿಗೆ ಸರಬರಾಜು ಮಾಡಲಾಗಿರುತ್ತದೆ.<br>• Digital Wall Painting ಮೂಲಕ ನಿರ್ಮಾಣ ಕಾರ್ಮಿಕರಿಗೆ ಮಂಡಳಿಯ ವತಿಯಿಂದ ಒದಗಿಸಲಾಗುತ್ತಿರುವ ಸೌಲಭ್ಯಗಳನ್ನು ಪ್ರಾದೇಶಿಕ ಮಟ್ಟದಲ್ಲಿ ಪ್ರಚಾರ ಪಡಿಸಲು ಕ್ರಮ ಕೈಗೊಳ್ಳಲಾಗುತ್ತಿದೆ. |

• BMTC ಬಸ್ ನಿಲ್ದಾಣಗಳಲ್ಲಿ 30 ಸೆಕೆಂಡ್ ಅವಧಿಯ ವೀಡಿಯೋ ಸ್ಪಾಟ್‌ಗಳಲ್ಲಿ ನಿರ್ಮಾಣ ಕಾರ್ಮಿಕರಿಗೆ ಮಂಡಳಿಯ ವತಿಯಿಂದ ಒದಗಿಸಲಾಗುತ್ತಿರುವ ಸೌಲಭ್ಯಗಳನ್ನು ಪ್ರಚಾರ ಪಡಿಸಲಾಗಿರುತ್ತದೆ.

• ಕಟ್ಟಡ ಹಾಗೂ ಇತರೆ ನಿರ್ಮಾಣ ಕಾರ್ಮಿಕರಿಗೆ ಮಂಡಳಿಯ ವತಿಯಿಂದ ಒದಗಿಸಲಾಗುತ್ತಿರುವ ಸೌಲಭ್ಯಗಳನ್ನೊಳಗೊಂಡ ಕರಪತ್ರ (Pamphlets)ಗಳನ್ನು ಮುದ್ರಿಸಿ ಪ್ರತಿ ತಾಲ್ಲೂಕಿಗೆ 1,000 ದಂತೆ (ಒಟ್ಟು 2,40,000) ತಾಲ್ಲೂಕು ಕಾರ್ಮಿಕ ಕಛೇರಿಗಳಿಗೆ ಸರಬರಾಜು ಮಾಡಲಾಗಿರುತ್ತದೆ.

• ಕಟ್ಟಡ ಹಾಗೂ ಇತರೆ ನಿರ್ಮಾಣ ಕಾರ್ಮಿಕರಿಗೆ ಮಂಡಳಿಯ ವತಿಯಿಂದ ಒದಗಿಸಲಾಗುತ್ತಿರುವ ಸೌಲಭ್ಯಗಳನ್ನೊಳಗೊಂಡ Calendar ಗಳನ್ನು ಇಲಾಖೆಯ ಅಧಿಕಾರಿಗಳಿಗೆ ಸರಬರಾಜು ಮಾಡಲಾಗಿರುತ್ತದೆ.

• ರಾಜ್ಯದ ವಿವಿಧ ಕನ್ನಡ ದಿನ ಪತ್ರಿಕೆಗಳು ಮತ್ತು ಪತ್ರಿಕೆಗಳ ವಿಶೇಷಾಂಕಗಳಲ್ಲಿ ಮಂಡಳಿಯ ಯೋಜನೆಗಳು ಹಾಗೂ ಸೌಲಭ್ಯಗಳ ಕುರಿತು ಮಾಹಿತಿ ಪ್ರಕಟಿಸಲಾಗಿದೆ.

ಮಂಡಳಿಯ ವತಿಯಿಂದ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರಿಗೆ ಒದಗಿಸಲಾಗುತ್ತಿರುವ ಸೌಲಭ್ಯಗಳನ್ನೊಳಗೊಂಡ ಸಾಕ್ಷ್ಯಚಿತ್ರ ಮತ್ತು ಕಿರು ಚಿತ್ರಗಳನ್ನು ಚಿತ್ರಿಸಲು ಕ್ರಮ ಕೈಗೊಳ್ಳಲಾಗುತ್ತಿದೆ

2. <u>ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿ</u>

ಈ ಮಂಡಳಿಯು ಜಾರಿಗೊಳಿಸುತ್ತಿರುವ ಯೋಜನೆಗಳಡಿ ದೊರೆಯುವ ಸೌಲಭ್ಯಗಳ ಕುರಿತು ಮಾಹಿತಿ ನೀಡಲು, ಸೌಲಭ್ಯಗಳನ್ನು ಪಡೆಯಲು, ಅವಶ್ಯಕ ದಾಖಲೆಗಳನ್ನು ಸಂಗ್ರಹಿಸಲು ಮತ್ತು ಸಂಬಂಧಪಟ್ಟವರಿಗೆ ತಲುಪಿಸಿ ಸೌಲಭ್ಯಗಳನ್ನು ಪಡೆಯಲು ಅನುಕೂಲವಾಗುವಂತೆ ರಾಜ್ಯದ ಬಹುತೇಕ ಎಲ್ಲಾ ತಾಲ್ಲೂಕು ಕೇಂದ್ರಗಳಲ್ಲಿ ಕಾರ್ಮಿಕ ಸೇವಾ ಕೇಂದ್ರಗಳನ್ನು ತೆರೆಯಲಾಗಿದೆ. ಸದರಿ ಕೇಂದ್ರಗಳಲ್ಲಿ ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿಯಿಂದ ನೇಮಕಗೊಂಡ ಕಾರ್ಮಿಕ ಬಂಧುಗಳು ಎಲ್ಲಾ ರೀತಿಯ ಸಹಾಯ ಒದಗಿಸುತ್ತಾರೆ.

3. <u>ಕರ್ನಾಟಕ ಕಾರ್ಮಿಕ ಕಲ್ಯಾಣ ಮಂಡಳಿ</u> [ಸಂಘಟಿತ ವಲಯದ ಕಾರ್ಮಿಕರಿಗೆ] ಮಂಡಳಿಯಲ್ಲಿ ಪ್ರಸ್ತುತ ಜಾರಿಯಲ್ಲಿರುವ ಕಲ್ಯಾಣ ಯೋಜನೆಗಳ ಮಾಹಿತಿಯು ಕಾರ್ಮಿಕರಿಗೆ ಸುಲಭ ರೀತಿಯಲ್ಲಿ ದೊರಕುವಂತೆ ವಿವರಗಳನ್ನು ಮಂಡಳಿಯ ವೆಬ್‌ಸೈಟ್, ಕರಪತ್ರಗಳು, ಗೋಡೆ ಕ್ಯಾಲೆಂಡರ್‌ಗಳು ಈ ಮೂಲಕ ಅರಿವು ಮೂಡಿಸಲಾಗುತ್ತಿದೆ. ಇದುವರೆವಿಗೂ ಮಂಡಳಿಯ ಯೋಜನೆಗಳ

| | | |
|---|---|---|
| | | ಉಪಯೋಗವನ್ನು ಸಂಘಟಿತ ಕಾರ್ಮಿಕರು ಮತ್ತು ಅವರ ಕುಟುಂಬದ ಅವಲಂಬಿತರು ಗರಿಷ್ಠ ಮಟ್ಟದಲ್ಲಿ ಇದರ ಲಾಭ ಪಡೆದುಕೊಂಡಿರುತ್ತಾರೆ. |
| ಈ) | ಸರ್ಕಾರವು ಆ ಕುರಿತು ಗಮನಿಸಿ ಕೈಗೊಳ್ಳಲಿರುವ ಸರಳ, ಸುಲಭ ಮತ್ತು ಅನುಕರಣೀಯ ಕ್ರಮಗಳೇನು: | **<u>1. ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿ:</u>** ಈ ಮಂಡಳಿಯು ಜಾರಿಗೊಳಿಸುತ್ತಿರುವ ಯೋಜನೆಯಡಿ ಅರಿವು ಮೂಡಿಸುವ ಸಲುವಾಗಿ ಈ ಕೆಳಕಂಡ ಕ್ರಮಗಳನ್ನು ಕೈಗೊಳ್ಳಲಾಗಿದೆ:<br>➢ ಕರಪತ್ರ, ದಿನ ಪತ್ರಿಕೆ, ಬ್ಯಾನರ್ಸ್, ಹಾಗೂ ಹೋರ್ಡಿಂಗ್ಸ್‌ಗಳ ಮೂಲಕ ಪ್ರಚಾರ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗುತ್ತಿದೆ.<br>➢ ಕಾರ್ಮಿಕ ಇಲಾಖೆ ಹಾಗೂ ಅದರ ಅಧೀನದಲ್ಲಿ ಬರುವ ಮಂಡಳಿ/ ಸೊಸೈಟಿಗಳು ಜಾರಿಗೊಳಿಸುತ್ತಿರುವ ಯೋಜನೆಗಳ ಕುರಿತಂತೆ ಕರ್ನಾಟಕ ಕಾನೂನು ಸೇವಾ ಪ್ರಾಧಿಕಾರದ ಜೊತೆ ಗೂಡಿ ಸಾರ್ವಜನಿಕರಲ್ಲಿ ಅರಿವು ಮೂಡಿಸಲಾಗುತ್ತಿದೆ.<br>➢ ಮಂಡಳಿ/ ಸೊಸೈಟಿಗಳು ಜಾರಿಗೊಳಿಸುತ್ತಿರುವ ಯೋಜನೆಗಳ ಬಗ್ಗೆ ಮಾಹಿತಿ ಹಾಗೂ ನೋಂದಣಿ ಪ್ರಕ್ರಿಯೆಗಳ ವಿಧಾನಗಳ ಬಗ್ಗೆ ತಿಳಿಸುವ ಸಲುವಾಗಿ ಕಾರ್ಮಿಕ ಇಲಾಖೆಯ ಅಧಿಕಾರಿಗಳಿಗೆ ಜಿಲ್ಲಾ ಮಟ್ಟದಲ್ಲಿ ತರಬೇತಿ ಕಾರ್ಯಕ್ರಮವನ್ನು ಏರ್ಪಡಿಸಲಾಗಿದ್ದು, ಈ ಮೂಲಕ ಅಧಿಕಾರಿಗಳು ತಮ್ಮ ವ್ಯಾಪ್ತಿಯಲ್ಲಿ ಬರುವ ಕಾರ್ಮಿಕರಿಗೆ ಅರಿವು ಮೂಡಿಸಲು ನೆರವಾಗುವಂತೆ ಕ್ರಮ ಕೈಗೊಳ್ಳಲಾಗಿದೆ.<br>➢ ಕಾರ್ಮಿಕ ಇಲಾಖೆ ಹಾಗೂ ಅದರ ಅಧೀನದಲ್ಲಿ ಬರುವ ಮಂಡಳಿ ಹಾಗೂ ಸೊಸೈಟಿಗಳು ಜಾರಿಗೊಳಿಸುತ್ತಿರುವ ಯೋಜನೆಗಳ ಬಗ್ಗೆ ಮಾಹಿತಿ ನೀಡಲು ಕಾರ್ಮಿಕ ಸಹಾಯವಾಣಿ 155214 ಅನ್ನು ತೆರೆಯಲಾಗಿದೆ.<br>➢ ಅಂಬೇಡ್ಕರ್ ಕಾರ್ಮಿಕ ಸಹಾಯ ಹಸ್ತ ಯೋಜನೆಯಡಿ 11 ವರ್ಗಗಳ ಅಸಂಘಟಿತ ಕಾರ್ಮಿಕರ ನೋಂದಣಿಗಾಗಿ ಆನ್‌ಲೈನ್ ಮೂಲಕ ನೋಂದಣಿ ಪ್ರಕ್ರಿಯೆಯನ್ನು ನಡೆಸಲಾಗುತ್ತಿದೆ.<br>➢ ಮಂಡಳಿಯು ಜಾರಿಗೊಳಿಸುತ್ತಿರುವ ಯೋಜನೆಗಳಡಿ ದೊರಕುವ ಸೌಲಭ್ಯಗಳ ಕುರಿತು ಸಾರ್ವಜನಿಕರಲ್ಲಿ ಅರಿವು ಮೂಡಿಸಲು ರಾಜ್ಯದ ಪ್ರಮುಖ ಸ್ಥಳಗಳಲ್ಲಿ ಹೋರ್ಡಿಂಗ್‌ಗಳನ್ನು ಪ್ರದರ್ಶಿಸಲು ಕ್ರಮಕೈಗೊಂಡಿದೆ.<br>**2) ಕರ್ನಾಟಕ ಕಾರ್ಮಿಕ ಕಲ್ಯಾಣ ಮಂಡಳಿ:-** ಈ ಮಂಡಳಿಯಲ್ಲಿರುವ ಯೋಜನೆಗಳ ಸೌಲಭ್ಯಗಳನ್ನು ಹೆಚ್ಚಿನ ಸಂಖ್ಯೆಯಲ್ಲಿ ಸಂಘಟಿತ ಕಾರ್ಮಿಕರು ಮತ್ತು ಅವರ ಅವಲಂಬಿತರು ಯೋಜನೆಯ ಲಾಭವನ್ನು ಸುಲಭ ರೀತಿಯಲ್ಲಿ |

|  |  | ಪಡೆದುಕೊಳ್ಳಲು ಮಂಡಳಿಯು ತಂತ್ರಾಂಶವನ್ನು (ಆನ್‌ಲೈನ್) ಸಿದ್ಧಪಡಿಸಿದ್ದು, ಈ ಮೂಲಕ ಯೋಜನೆಗಳ ಲಾಭ ಪಡೆದುಕೊಳ್ಳುತ್ತಿದ್ದಾರೆ. |
|---|---|---|
| ಉ) | ಕಾರ್ಮಿಕರಿಗೆ ಸಂಬಂಧಪಟ್ಟ ವಿವಿಧ ಇಲಾಖೆಗಳೊಂದಿಗೆ ಸಮನ್ವಯ ಸಾಧಿಸಿ, ಸರ್ಕಾರದ ಉದ್ದೇಶಿತ ಎಲ್ಲಾ ಯೋಜನೆಗಳು ಅವರನ್ನು ತಲುಪುವಂತೆ ಮಾಡುವಲ್ಲಿ ಸರ್ಕಾರದ ಕಾರ್ಯಕ್ರಮಗಳೇನು: | 1. **ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿ [ಅಸಂಘಟಿತ ವಲಯದ ಕಾರ್ಮಿಕರು]**<br>ಮಂಡಳಿಯು ಜಾರಿಗೊಳಿಸುತ್ತಿರುವ ಯೋಜನೆಗಳ ಯಶಸ್ವಿಗಾಗಿ ವಿವಿಧ ಇಲಾಖೆಗಳನ್ನು ಸಂಪರ್ಕಿಸಲಾಗಿದ್ದು, ಉದ್ದೇಶಿತ ಫಲಾನುಭವಿಗಳಿಗೆ ತಲುಪಲು ಈ ಕೆಳಕಂಡಂತೆ ಕ್ರಮಕೈಗೊಳ್ಳಲಾಗಿದೆ.<br>• ಕರ್ನಾಟಕ ರಾಜ್ಯ ಖಾಸಗಿ ವಾಣಿಜ್ಯ ಸಾರಿಗೆ ಕಾರ್ಮಿಕರ ಅಪಘಾತ ಪರಿಹಾರ ಯೋಜನೆಯಡಿ ಸಾರಿಗೆ ಇಲಾಖೆಯನ್ನು ಸಂಪರ್ಕಿಸಿ ದತ್ತಾಂಶ ಸಂಗ್ರಹಿಸಲಾಗಿದ್ದು, ಅವರಲ್ಲಿ ನೋಂದಣಿ/ ನವೀಕರಣಕ್ಕಾಗಿ ಬರುವ ಖಾಸಗಿ ವಾಣಿಜ್ಯ ಸಾರಿಗೆ ಚಾಲಕರಿಗೆ ಯೋಜನೆಯ ಕುರಿತು ಮಾಹಿತಿ ನೀಡುವಂತೆ ಕೋರಲಾಗಿದೆ.<br>• ಅಪಘಾತದ ಕುರಿತು ಮಾಹಿತಿ ಪಡೆಯಲು ಪೋಲೀಸ್ ಇಲಾಖೆಯನ್ನು ಸಂಪರ್ಕಿಸಲಾಗುತ್ತಿದೆ.<br>ಪ್ರಧಾನ ಮಂತ್ರಿ ಶ್ರಮಯೋಗಿ ಮಾನ್-ಧನ್ ಯೋಜನೆಯಡಿ ಫಲಾನುಭವಿಗಳ ನೋಂದಣಿಗಾಗಿ ಶಿಕ್ಷಣ ಇಲಾಖೆ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, ಕೃಷಿ ಇಲಾಖೆ, ಮೀನುಗಾರಿಕೆ ಇಲಾಖೆ ಹಾಗೂ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಇತ್ಯಾದಿ ಇಲಾಖೆಗಳನ್ನು ಸಂಪರ್ಕಿಸಲಾಗಿದೆ.<br>2. **ಕರ್ನಾಟಕ ಕಾರ್ಮಿಕ ಕಲ್ಯಾಣ ಮಂಡಳಿ** ಈ ಮಂಡಳಿಯಲ್ಲಿ ಪ್ರಸ್ತುತ ಜಾರಿಯಲ್ಲಿರುವ ಯೋಜನೆಗಳ ಸೌಲಭ್ಯವು ಸರ್ಕಾರವು ವಿವಿಧ ಇಲಾಖೆಗಳಲ್ಲಿರುವ ಯೋಜನೆಗಳ ಮಾಹಿತಿ ಬಗ್ಗೆ ಸಿದ್ಧಪಡಿಸಿರುವ **'ಮಾಹಿತಿ ಕಣಜ'** ಈ ಮೂಲಕ ಮಂಡಳಿಯು ಸಹ ಸಂಘಟಿತ ಕಾರ್ಮಿಕರಿಗೆ ಸೌಲಭ್ಯ ದೊರಕುವಂತೆ ಕ್ರಮ ಕೈಗೊಳ್ಳಲಾಗುತ್ತಿದೆ. |

**ಕಾಇ 145 ಎಲ್‌ಇಟಿ 2021**

(ಅರಬೈಲ್ ಶಿವರಾಂ ಹೆಬ್ಬಾರ್)
ಕಾರ್ಮಿಕ ಸಚಿವರು

# ಅನುಬಂಧ

**(ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 3641)**

**ಕರ್ನಾಟಕಕಟ್ಟಡ ಮತ್ತುಇತರೆ ನಿರ್ಮಾಣಕಾರ್ಮಿಕರಕಲ್ಯಾಣ ಮಂಡಳಿ**

| 2007 ರಿಂದ ಫಬ್ರವರಿ–2021 ರವರೆಗೆಕಲ್ಯಾಣ ಮತ್ತು ಸಾಮಾಜಿಕ ಭದ್ರತಾ ಸೌಲಭ್ಯಗಳಡಿಯಲ್ಲಿ ವಿತರಿಸಲಾದ ವರ್ಷವಾರು ಸಾಧನೆಯ ವಿವರ | | | | | | | | | | | | |
|---|---|---|---|---|---|---|---|---|---|---|---|---|
| ಸೌಲಭ್ಯಗಳ ವಿವರ | 2007–08 ರಿಂದ 2012–13 ರವರೆಗೆ | | 2013–14 ರಿಂದ 2017–18 ರವರೆಗೆ | | 2018–19 | | 2019–20 | | 2020–21 | | ಒಟ್ಟು | |
| | ಸಂಖ್ಯೆ | ಮೊತ್ತ | ಸಂಖ್ಯೆ | ಮೊತ್ತ | ಸಂಖ್ಯೆ | ಮೊತ್ತ | ಸಂಖ್ಯೆ | ಮೊತ್ತ | ಸಂಖ್ಯೆ | ಮೊತ್ತ | ಸಂಖ್ಯೆ | ಮೊತ್ತ |
| ಶೈಕ್ಷಣಿಕ | 10,896 | 27,679,600 | 227,489 | 1,038,126,292 | 95,637 | 533,279,365 | 125,403 | 724,788,917 | 100,168 | 735,327,640 | 559,593 | 3,059,201,814 |
| ಮದುವೆ | 2,126 | 15,160,000 | 23,514 | 1,161,415,000 | 11,380 | 475,875,000 | 10,966 | 453,596,000 | 14,784 | 379,665,000 | 62,770 | 2,485,711,000 |
| ಅಂತ್ಯ ಸಂಸ್ಕಾರ | 1,376 | 20,921,000 | 6,368 | 328,454,619 | 2,208 | 117,282,000 | 3,674 | 198,641,000 | 2,788 | 150,790,000 | 16,414 | 816,088,619 |
| ಪ್ರಮುಖ ವೈದ್ಯಕೀಯ | 233 | 8,104,269 | 2,272 | 63,982,540 | 530 | 12,829,473 | 778 | 22,668,307 | 1,125 | 41,473,646 | 4,938 | 149,058,235 |
| ಅಪಘಾತ ಪರಿಹಾರ | 195 | 14,777,740 | 185 | 25,574,260 | 58 | 13,781,000 | 116 | 31,957,000 | 123 | 20,559,000 | 677 | 106,649,000 |
| ಹೆರಿಗೆ | 365 | 2,192,000 | 1,677 | 24,721,500 | 552 | 9,160,000 | 572 | 11,930,174 | 55 | 1,100,000 | 3,221 | 49,103,674 |
| ವೈದ್ಯಕೀಯ ವೆಚ್ಚ | 779 | 742,750 | 268 | 565,048 | 192 | 5,592,698 | 95 | 2,019,557 | 206 | 2,512,933 | 1,540 | 11,432,986 |
| ಉಪಕರಣಖರೀದಿಗೆ ಸಾಲ | 3 | 14,890 | 17 | 85,000 | 0 | 0 | 0 | 0 | 0 | 0 | 20 | 99,890 |
| ಪಿಂಚಣಿ | 0 | 0 | 759 | 9,131,000 | 520 | 12,052,000 | 627 | 23,026,000 | 2,410 | 23,478,000 | 4,316 | 67,687,000 |
| ದುರ್ಬಲತೆ ಪಿಂಚಣಿ | 0 | 0 | 11 | 1,608,000 | 7 | 1,214,000 | 18 | 2,999,000 | 40 | 1,270,000 | 76 | 7,091,000 |
| ಕುಟುಂಬ ಪಿಂಚಣಿ | 0 | 0 | 0 | 0 | 0 | 0 | 0 | 0 | 11 | 17,000 | 11 | 17,000 |
| ಅನಿಲ ಭಾಗ್ಯ | 0 | 0 | 0 | 20,000,000 | 4,055 | 0 | 0 | 0 | 0 | 0 | 4,055 | 20,000,000 |
| ಶ್ರಮ ಸಾಮರ್ಥ್ಯ | 0 | 0 | 1,854 | 83,995,481 | 3,157 | 56,972,953 | 623 | 90,170,239 | 0 | 0 | 5,634 | 231,138,673 |
| ಬಿಎಂಟಿಸಿ ಬಸ್ ಪಾಸ್ | 0 | 0 | 0 | 52,479,000 | 1,602 | 0 | 2,996 | 594,300 | 45,281 | 384,878,550 | 49,879 | 437,951,850 |
| ವಸತಿ ಸೌಲಭ್ಯ | 0 | 0 | 0 | 0 | 0 | 0 | 5,129 | 760,000,000 | 0 | 0 | 5,129 | 760,000,000 |
| ಶಿಶು ಪಾಲನಾ ಕೇಂದ್ರಗಳು | 0 | 0 | 0 | 0 | 0 | 0 | 501 | 3,000,000 | 218 | 5,763,296 | 719 | 8,763,296 |
| ತಾಯಿ ಮಗು ಸಹಾಯ ಹಸ್ತ | 0 | 0 | 0 | 0 | 0 | 0 | 0 | 0 | 27 | 162,000 | 27 | 162,000 |
| **ಒಟ್ಟು** | **15,973** | **89,592,249** | **264,414** | **2,810,137,740** | **119,898** | **1,238,038,489** | **151,498** | **2,325,390,494** | **167,236** | **1,746,997,065** | **719,019** | **8,210,156,037** |

ಕರ್ನಾಟಕ ಸರ್ಕಾರ

ಸಂಖ್ಯೆ: ಕಾಇ 138 ಎಲ್‌ಇಟಿ 2021

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸಸೌಧ,
ಬೆಂಗಳೂರು, ದಿನಾಂಕ: 20 /09/2021

**ಇವರಿಂದ:**
ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ,
ಕಾರ್ಮಿಕ ಇಲಾಖೆ,
ವಿಕಾಸಸೌಧ, ಬೆಂಗಳೂರು.

**ಇವರಿಗೆ:**
ಕಾರ್ಯದರ್ಶಿ,
ಕರ್ನಾಟಕ ವಿಧಾನ ಸಭೆ
ವಿಧಾನಸೌಧ, ಬೆಂಗಳೂರು.

ಮಾನ್ಯರೆ,

ವಿಷಯ: ಮಾನ್ಯ ವಿಧಾನ ಸಭೆಯ ಸದಸ್ಯರಾದ ಡಾ॥ ಅಜಯ್ ಧರ್ಮಸಿಂಗ್ (ಜೇವರ್ಗಿ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 3648ಕ್ಕೆ ಉತ್ತರ ಸಲ್ಲಿಸುವ ಕುರಿತು.

*******

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನ ಸಭೆಯ ಸದಸ್ಯರಾದ ಡಾ॥ ಅಜಯ್ ಧರ್ಮಸಿಂಗ್ (ಜೇವರ್ಗಿ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 3648ಕ್ಕೆ ಉತ್ತರದ 20 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಮುಂದಿನ ಸೂಕ್ತ ಕ್ರಮಕ್ಕಾಗಿ ತಮಗೆ ಕಳುಹಿಸಿಕೊಡಲು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮ ವಿಶ್ವಾಸಿ,

(ಪ್ರದೀಪ್ ಕುಮಾರ್ ಬಿ.ಎಸ್)
ಸರ್ಕಾರದ ಅಧೀನ ಕಾರ್ಯದರ್ಶಿ,
ಕಾರ್ಮಿಕ ಇಲಾಖೆ.

# ಕರ್ನಾಟಕ ವಿಧಾನ ಸಭೆ

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ 3648
2. ಮಾನ್ಯ ಸದಸ್ಯರ ಹೆಸರು ಡಾ|| ಅಜಯ್ ಧರ್ಮಸಿಂಗ್ (ಜೇವರ್ಗಿ)
3. ಉತ್ತರಿಸಬೇಕಾದ ದಿನಾಂಕ 25/03/2021
4. ಉತ್ತರಿಸುವವರು ಮಾನ್ಯ ಕಾರ್ಮಿಕ ಸಚಿವರು

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಕಾರ್ಮಿಕ ಇಲಾಖೆಯಲ್ಲಿ ವಿವಿಧ ಸೌಲಭ್ಯಗಳನ್ನು ಒದಗಿಸುವಲ್ಲಿ ದುರುಪಯೋಗವಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ;(ವಿವರ ನೀಡುವುದು) | ಇಲಾಖೆಯ ಅಧೀನದಲ್ಲಿ ಕಾರ್ಯನಿರ್ವಹಿಸುತ್ತಿರುವ ಮೂರು ಮಂಡಳಿಗಳ ಮೂಲಕ ವಿವಿಧ ಸೌಲಭ್ಯಗಳನ್ನು ಒದಗಿಸುವಲ್ಲಿ ದುರುಪಯೋಗವಾಗಲು ಅವಕಾಶವಿರುವುದಿಲ್ಲ.<br>1. ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿಯು ಒದಗಿಸುತ್ತಿರುವ ಸೌಲಭ್ಯಗಳು ದುರುಪಯೋಗವಾಗಲು ಅವಕಾಶವಾಗಬಾರದೆಂಬ ದೃಷ್ಟಿಯಿಂದ ಮಂಡಳಿಯು ಈ ಕೆಳಗಿನಂತೆ ವ್ಯವಸ್ಥೆ ಮಾಡಿರುತ್ತದೆ.<br>• ಅರ್ಜಿದಾರರು ಒಂದು ಲಾಗಿನ್ ಐಡಿ ಯಿಂದ ಒಂದು ನೋಂದಣಿ ಅರ್ಜಿಯನ್ನು ಮಾತ್ರ ಇ–ಸಹಿ ಮೂಲಕ ಸಲ್ಲಿಸಬಹುದಾಗಿದೆ.<br>• ಸೇವಾ ಸಿಂಧುವಿನಲ್ಲಿ ನೋಂದಣಿಯಾದ (Common Service Centre - CSC)/ ಸೆಂಟರ್‌ಗಳಲ್ಲಿ ಒಂದಕ್ಕಿಂತ ಹೆಚ್ಚು ಅರ್ಜಿಗಳು ಒಂದೇ ಲಾಗಿನ್ ಐಡಿ ಮೂಲಕ ಸಲ್ಲಿಸಬಹುದಾಗಿದೆ. ಆದರೆ, ಪ್ರತಿ ಒಂದು ಅರ್ಜಿಗೆ ಸಂಬಂಧಿಸಿದ ಅರ್ಜಿದಾರರು ಆಧಾರ್ ಸಂಖ್ಯೆಗೆ ಲಿಂಕ್‌ಗೊಂಡ ಇ–ಸಹಿ ಕಡ್ಡಾಯವಾಗಿರುತ್ತದೆ. ಸದರಿ ಆಧಾರ್‌ಗೆ ಲಿಂಕ್‌ಗೊಂಡ ಮೊಬೈಲ್ ನಂಬರ್‌ಗೆ ಓಟಿಪಿ ಕಳುಹಿಸಲಾಗುವುದು. ಸದರಿ ಓಟಿಪಿ ನಂಬರ್ ಅನ್ನು ಅರ್ಜಿದಾರರು ನೋಂದಣಿ ಅರ್ಜಿಯನ್ನು ಸಲ್ಲಿಸುವ ಸಮಯದಲ್ಲಿ ತಿಳಿಸುವುದು ಕಡ್ಡಾಯವಾಗಿರುತ್ತದೆ. ಒಂದು ವೇಳೆ ಓಟಿಪಿ ತಿಳಿಸದಿದ್ದಲ್ಲಿ ನೋಂದಣಿ ಪ್ರಕ್ರಿಯೆ ಪೂರ್ಣಗೊಳ್ಳುವುದಿಲ್ಲ.<br>• ಅಲ್ಲದೆ, ಸಂಬಂಧಿಸಿದ ಕಾರ್ಮಿಕ ನಿರೀಕ್ಷಕರು ತಮ್ಮಲ್ಲಿ ಸ್ವೀಕರಿಸಿದ ನೋಂದಣಿ ಅರ್ಜಿಗಳನ್ನು ಪರಿಶೀಲಿಸಿ ಇ–ಸಹಿ ಇಲ್ಲದೆ ನೋಂದಣಿ ಮಾಡಲು ಅವಕಾಶ ಕಲ್ಪಿಸಲಾಗಿದೆ.<br>• ಆನ್‌ಲೈನ್ ಮೂಲಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರನ್ನು ನೋಂದಾಯಿಸುವ ಪ್ರಕ್ರಿಯೆ ಜಾರಿಯಲ್ಲಿದ್ದು, ನೋಂದಣಿಗಾಗಿ ಸ್ವೀಕರಿಸಿದ ಅರ್ಜಿಗಳನ್ನು ಸಂಬಂಧಿಸಿದ ಕಾರ್ಮಿಕ ನಿರೀಕ್ಷಕರು 45 ದಿನಗಳೊಳಗಾಗಿ ಖುದ್ದು ಪರಿಶೀಲನೆ ಮಾಡಿ ಸದರಿ ಅರ್ಜಿದಾರರು ಅರ್ಹ ಕಟ್ಟಡ ಕಾರ್ಮಿಕರೆಂದು ಕಂಡು ಬಂದಲ್ಲಿ ಅನುಮೋದನೆ ನೀಡಿ ನೋಂದಣಿ ಮಾಡುತ್ತಾರೆ. |

| | | |
|---|---|---|
| | | • ಮಂಡಳಿಯ ಫಲಾನುಭವಿಗಳ ನೋಂದಣಿ, ನವೀಕರಣ ಮತ್ತು ಸೌಲಭ್ಯಗಳನ್ನು ಪಡೆಯಲು ತಂತ್ರಾಂಶದ ಮೂಲಕ ಅರ್ಜಿ ಸಲ್ಲಿಸುವ ಸಂದರ್ಭದಲ್ಲಿ ಅರ್ಜಿದಾರರು ಆಧಾರ್ ಲಿಂಕ್‌ಗೆ ಒಳಪಟ್ಟ ಮೊಬೈಲ್ ಸಂಖ್ಯೆಗೆ ಓಟಿಪಿ ಯನ್ನು ಕಳುಹಿಸಿಕೊಡಲಾಗುವುದು. ಸದರಿ ಓಟಿಪಿ ಸಂಖ್ಯೆಯನ್ನು ಅರ್ಜಿದಾರರು ತಿಳಿಸುವುದನ್ನು ಕಡ್ಡಾಯ ಮಾಡುವುದರ ಮೂಲಕ ದುರುಪಯೋಗವಾಗುವುದನ್ನು ತಡೆಯಲಾಗಿರುತ್ತದೆ.<br>• ಮಂಡಳಿ ವತಿಯಿಂದ ಕಾರ್ಮಿಕರಲ್ಲಿ ಮಂಡಳಿಯ ಸೌಲಭ್ಯಗಳ ಕುರಿತು ಅರಿವು ಮೂಡಿಸಲು ವಿವಿಧ ಮಾಹಿತಿ ಶಿಕ್ಷಣ ಮತ್ತು ಸಂವಹನ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗುತ್ತಿದ್ದು, ಸದರಿ ಚಟುವಟಿಕೆಗಳಲ್ಲಿ ಅನರ್ಹ ಕಟ್ಟಡ ಕಾರ್ಮಿಕರು ತಪ್ಪು ಮಾಹಿತಿ ನೀಡಿ ನೋಂದಾಯಿಸಿಕೊಂಡು ಮಂಡಳಿಯ ಸೌಲಭ್ಯವನ್ನು ಪಡೆದುಕೊಂಡಿದ್ದು ಕಂಡು ಬಂದಲ್ಲಿ **"ಕಾನೂನು ರೀತ್ಯ ಕ್ರಮ ಕೈಗೊಳ್ಳಲಾಗುತ್ತದೆ"** ಎಂದು ಎಚ್ಚರಿಕೆಯ ಬರಹವನ್ನು ಪ್ರಕಟಿಸಲಾಗುತ್ತಿದೆ.<br><br>**2. ಕರ್ನಾಟಕ ಕಾರ್ಮಿಕ ಕಲ್ಯಾಣ ಮಂಡಳಿ:**<br>ಈ ಮಂಡಳಿಗೆ ವಂತಿಗೆ ಪಾವತಿಸುವ ಸಂಘಟಿತ ಕಾರ್ಮಿಕರು ಮತ್ತು ಅವರ ಕುಟುಂಬದ ಅವಲಂಬಿತರಿಗೆ ಕಲ್ಯಾಣ ಯೋಜನೆಯಡಿ ವಿವಿಧ ಸೌಲಭ್ಯಗಳನ್ನು ನೀಡಲಾಗುತ್ತಿದೆ. ಯೋಜನೆಯಡಿ ನೀಡುವ ಧನ ಸಹಾಯವನ್ನು ಫಲಾನುಭವಿಗಳ ಬ್ಯಾಂಕ್ ಖಾತೆಗೆ ನೇರವಾಗಿ ಆರ್.ಟಿ.ಜಿ.ಎಸ್ ಮೂಲಕ ಜಮಾ ಮಾಡಲಾಗುತ್ತಿದೆ. ಇದರಿಂದ ಯಾವುದೇ ದುರುಪಯೋಗವಾಗಿರುವುದಿಲ್ಲ. |
| ಆ) | ಕಾರ್ಮಿಕರ ನೋಂದಣಿ ಹಾಗೂ ಗುರುತಿನ ಚೀಟಿ ನೀಡುವಲ್ಲಿ ಅನುಸರಿಸಲಾಗುತ್ತಿರುವ ಮಾರ್ಗಸೂಚಿಗಳೇನು; (ವಿವರ ನೀಡುವುದು) | **1. ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿ:**<br>ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರು ಮಂಡಳಿಯ ಫಲಾನುಭವಿಗಳಾಗಿ ನೋಂದಣಿಯಾಗಲು ಅನುಸರಿಸಬೇಕಾದ ಮಾನದಂಡಗಳು ಈ ಕೆಳಕಂಡಂತಿದೆ.<br>• ಕಟ್ಟಡ ಮತ್ತು ಇತರೆ ನಿರ್ಮಾಣ ಕೆಲಸಗಳಿಗೆ ಸಂಬಂಧಿಸಿದ ಈ ಕೆಳಗಿನ ಯಾವುದಾದರೂ ಕೆಲಸ ನಿರ್ವಹಿಸುತ್ತಿರಬೇಕು.<br>1. ನಿರ್ಮಾಣ 2. ಮಾರ್ಪಾಡು 3. ರಿಪೇರಿ 4. ನಿರ್ವಹಣೆ ಅಥವಾ ಕಟ್ಟಡ ಕೆಡವುವಿಕೆಗೆ ಸಂಬಂಧಿಸಿದ ಕಾಮಗಾರಿ 5. ಕಟ್ಟಡಗಳು 6. ಬೀದಿಗಳು 7. ರಸ್ತೆಗಳು 8. ರೈಲ್ವೆಗಳು 9. ಟ್ರಾಮ್‌ವೇಗಳು 10. ಏರ್‌ಫೀಲ್ಡ್ಸ್ 11. ನೀರಾವರಿ ಚರಂಡಿ 12. ಏರಿ/ಕಟ್ಟೆಕಟ್ಟುವುದು ಮತ್ತು ನೌಕಾ ಕಾಮಗಾರಿಗಳು 13. ಪ್ರವಾಹ ನಿಯಂತ್ರಣ ಕಾಮಗಾರಿಗಳು (ಮಳೆ ನೀರು, ಚರಂಡಿ ಕಾಮಗಾರಿಗಳು ಸೇರಿ) 14. ವಿದ್ಯುತ್ ಉತ್ಪಾದನೆ 15. ಪ್ರಸರಣ ಮತ್ತು ವಿತರಣೆ 16. ಜಲ ಕಾಮಗಾರಿಗಳು (ನೀರು ವಿತರಣಾ ನಾಲೆಗಳು ಸೇರಿ) 17. ತೈಲ ಮತ್ತು ಅನಿಲ ಸ್ಥಾವರಗಳು 18. ವಿದ್ಯುತ್ ಮಾರ್ಗಗಳು 19. ವೈರ್‌ಲೆಸ್ 20. ರೇಡಿಯೋ |

21. ದೂರದರ್ಶನ 22. ದೂರವಾಣಿ 23. ದೂರಸಂಪರ್ಕ ಮತ್ತು ಸಮುದ್ರ ಸಂವಹನಗಳಿಗೆ ಸಂಬಂಧಿಸಿದ ನಿರ್ಮಾಣ/ನವೀಕರಣ ಮತ್ತು ದುರಸ್ತಿ 24. ಅಣೆಕಟ್ಟುಗಳು 25. ನಾಲೆಗಳು 26. ಜಲಾಶಯಗಳು 27. ಜಲ ಮೂಲಗಳು 28. ಸುರಂಗಗಳು 29. ಸೇತುವೆಗಳು 30. ವಯಾಡಕ್ಟ್ಸ್ 31. ಆಕ್ವೆಡಕ್ಟ್ಸ್ 32. ಕೊಳವೆ ಮಾರ್ಗಗಳ ನಿರ್ಮಾಣ 33. ಸ್ಥಾವರಗಳು 34. ಕೂಲಿಂಗ್ ಟವರ್‌ಗಳು ಮತ್ತು ಪ್ರಸರಣ ಸ್ಥಾವರಗಳು.

**ಹೆಚ್ಚುವರಿ ನಿರ್ಮಾಣ ಕೆಲಸಗಳು:** 35. ಕಲ್ಲು ಗಣಿಗಾರಿಕೆ ಕಾಯ್ದೆ 1952ರ ವ್ಯಾಪ್ತಿಗೆ ಒಳಪಡದ ರಸ್ತೆ ಮತ್ತು ಕಟ್ಟಡ ನಿರ್ಮಾಣದ ಕಲ್ಲು ಕೆಲಸ 36. ನಿರ್ಮಾಣದಲ್ಲಿ ಚಪ್ಪಡಿ/ಟೈಲ್ಸ್‌ಗಳನ್ನು ಅಳವಡಿಸುವುದು 37. ಯುಜಿಡಿ ನಿರ್ಮಾಣ ಸೇರಿದಂತೆ ಒಳಚರಂಡಿ ಮತ್ತು ಪ್ಲಂಬಿಂಗ್ ಕೆಲಸ 38. ವೈರಿಂಗ್, ವಿತರಣೆ ಪ್ಯಾನಲ್ ಫಿಕ್ಸಿಂಗ್ ಇತ್ಯಾದಿಗಳನ್ನು ಒಳಗೊಂಡ ವಿದ್ಯುತ್ ಕೆಲಸ 39. ಕೂಲಿಂಗ್ ಮತ್ತು ಹೀಟಿಂಗ್ ಸಿಸ್ಟಂಗಳ ಸ್ಥಾಪನೆ ಮತ್ತು ಅಳವಡಿಕೆ 40. ಲಿಫ್ಟ್, ಎಸ್ಕಲೇಟರ್ ಇತ್ಯಾದಿಗಳ ಸ್ಥಾಪನೆ 41. ಸೆಕ್ಯೂರಿಟಿ ಗೇಟಗಳ ಸ್ಥಾಪನೆ 42. ಕಬ್ಬಿಣ/ಲೋಹದ ಗ್ರಿಲ್‌ಗಳು, ಕಿಟಕಿ, ಬಾಗಿಲುಗಳ ಸ್ಥಾಪನೆ 43. ನೀರಿನ ಕೊಯ್ಲು ರಚನೆಗಳ ನಿರ್ಮಾಣ 44. ಫ್ಲೋರಿಂಗ್, ಫಾಲ್ಸ್‌ಸೀಲಿಂಗ್, ವಾಲ್ ಪ್ಯಾನಲಿಂಗ್ ಮುಂತಾದವುಗಳನ್ನು ಒಳಗೊಂಡ ಒಳಾಂಗಣ ವಿನ್ಯಾಸ 45. ಕಟ್ಟಡ ನಿರ್ಮಾಣ ಸಂದರ್ಭದಲ್ಲಿ ಅಳವಡಿಸುವ ಗ್ಲಾಸ್ ಪ್ಯಾನಲ್‌ಗಳು, ಎಸಿಪಿ ಶೀಟ್‌ಗಳು, ಸ್ಪೈಡರ್ ಗ್ಲೇಜಿಂಗ್‌ಗಳು 46.ಪ್ರೀ-ಫ್ಯಾಬ್ರಿಕೇಟೆಡ್ ಕಾಂಕ್ರೀಟ್ ಮಾಡ್ಯೂಲ್ಸ್, ಕಾಂಕ್ರೀಟ್ ಬ್ರಿಕ್ಸ್, ಬ್ಲಾಕ್ಸ್, ಹಾಲೋಬ್ಲಾಕ್ಸ್, ಟೈಲ್ಸ್ ಮುಂತಾದವುಗಳ ಅಳವಡಿಕೆ 47.ಸಿಗ್ನೇಜ್, ರಸ್ತೆ ಪೀಠೋಪಕರಣಗಳು, ಬಸ್ ಆಶ್ರಯಗಳು/ ಸ್ಟ್ಯಾಂಡ್, ಸಿಗ್ನಲಿಂಗ್ ಸಿಸ್ಟಮ್ಸ್ ಮುಂತಾದವುಗಳ ನಿರ್ಮಾಣ 48.ರೋಟರಿಗಳ ನಿರ್ಮಾಣ ಮತ್ತು ಸ್ಥಾಪನೆ, ಕಾರಂಜಿಗಳು, ಸಾರ್ವಜನಿಕ ಉದ್ಯಾನವನ ಮತ್ತು ತೋಟಗಳಲ್ಲಿ ಈಜುಕೊಳಗಳು ಇತ್ಯಾದಿಗಳ ಅಳವಡಿಕೆ 49. ನಿರ್ಮಾಣ ಉದ್ದೇಶಗಳಿಗಾಗಿ ಭೂಮಿಯ ಕೆಲಸ, ಭೂಮಿಯ ಹರಡುವಿಕೆ, ನೆಲಸಮಗೊಳಿಸುವಿಕೆ ಮತ್ತು ಭೂಮಿಯ ಕತ್ತರಿಸುವಿಕೆ ಇತ್ಯಾದಿ ಕೆಲಸಗಳು 50. ತಾತ್ಕಾಲಿಕ ಆಶ್ರಯ ತಾಣಗಳ ನಿರ್ಮಾಣ ಮತ್ತು ಅಳವಡಿಕೆ 51. ಫಿಲಂಸೆಟ್ ಗಳ ನಿರ್ಮಾಣ ಮತ್ತು ಅಳವಡಿಕೆ. 52. ಸರ್ಕಾರದ ಅಧಿಸೂಚನೆ ಸಂಖ್ಯೆ ಕಾಇ 220 ಎಲ್‌ಇಟಿ 2013 ದಿನಾಂಕ 30-11-2013 ರಲ್ಲಿ Cutting Breaking and Crushing of Stone ಕೆಲಸಗಳನ್ನು ಸಹ ಕಟ್ಟಡ ಮತ್ತು ಇತರೆ ನಿರ್ಮಾಣ ಕೆಲಸಗಳೆಂದು ಪರಿಗಣಿಸಿದೆ.

- **ವಯೋಮಿತಿ:** 18 ರಿಂದ 60 ವರ್ಷದೊಳಗಿರಬೇಕು.
- **ನೋಂದಣಿ ಮಾಡುವ ಕಛೇರಿಗಳು:** ಕಾರ್ಮಿಕ ಅಧಿಕಾರಿಗಳು/ಹಿರಿಯ ಕಾರ್ಮಿಕ ನಿರೀಕ್ಷಕರು/ಕಾರ್ಮಿಕ ನಿರೀಕ್ಷಕರು, ಬೆಂಗಳೂರು ಮೆಟ್ರೋ ರೈಲು ನಿಗಮ ನಿಯಮಿತದ ಮುಖ್ಯ ಅಭಿಯಂತರರು

- **ನೋಂದಣಿಗಾಗಿ ಸಲ್ಲಿಸಬೇಕಾದ ಅಗತ್ಯ ದಾಖಲೆಗಳು:**

ಎ) ನಮೂನೆ- V-1ರಲ್ಲಿ ಅರ್ಜಿ

ಬಿ) ಕಾಮಗಾರಿ ನಡೆಯುವ ಕಟ್ಟಡದ ಮಾಲೀಕರು/ ಗುತ್ತಿಗೆದಾರರು, CREDAI(Confederation of Real Estate Developers Association of India), BAI (Builders Association of India)ಅಥವಾ ಕರ್ನಾಟಕ ಸ್ಟೇಟ್ ಕಾಂಟ್ರಾಕ್ಟರ್ಸ್ ಅಸೋಸಿಯೇಷನ್ ರವರು ನಮೂನೆ-V(A)ರಲ್ಲಿ ನೀಡುವಂತಹ 'ಉದ್ಯೋಗದ ದೃಢೀಕರಣ ಪತ್ರ' ಅಥವಾ ನೋಂದಾಯಿತ ಕಾರ್ಮಿಕ ಸಂಘಗಳು ನಮೂನೆ-V(B)ರಲ್ಲಿ ನೀಡುವಂತಹ 'ಉದ್ಯೋಗದ ದೃಢೀಕರಣ ಪತ್ರ' ಅಥವಾ ಕಾರ್ಮಿಕ ಅಧಿಕಾರಿ / ಹಿರಿಯ ಕಾರ್ಮಿಕ ನಿರೀಕ್ಷಕರು / ಕಾರ್ಮಿಕ ನಿರೀಕ್ಷಕರು ನಮೂನೆ-V(C)ರಲ್ಲಿ ನೀಡುವಂತಹ 'ಉದ್ಯೋಗದ ದೃಢೀಕರಣ ಪತ್ರ' ಅಥವಾ ಪಂಚಾಯತಿ ಅಭಿವೃದ್ಧಿ ಅಧಿಕಾರಿ / ಗ್ರಾಮ ಪಂಚಾಯತಿ ಕಾರ್ಯದರ್ಶಿಗಳು ನಮೂನೆ-V(D)ರಲ್ಲಿ ನೀಡುವಂತಹ 'ಉದ್ಯೋಗದ ದೃಢೀಕರಣ ಪತ್ರ'

ಸಿ) ಮೂರು ಪಾಸ್ ಪೋರ್ಟ್ ಅಳತೆಯ ಭಾವಚಿತ್ರಗಳು

ಡಿ) ವಯಸ್ಸಿನ ದೃಢೀಕರಣ ಪತ್ರ: ಶಾಲಾ ದಾಖಲಾತಿ, ವಾಹನ ಚಾಲನಾ ಪರವಾನಗಿ, ಪಾಸ್‌ಪೋರ್ಟ್, ಎಪಿಕ್‌ಕಾರ್ಡ್, ಆಧಾರ್‌ಕಾರ್ಡ್, ಎಲ್‌ಐಸಿ ವಿಮೆ ಪಾಲಿಸಿ ಅಥವಾ ಗ್ರಾಮ ಲೆಕ್ಕಿಗರು ಅಥವಾ ಕಂದಾಯ ನಿರೀಕ್ಷಕರು ಅಥವಾ ಸ್ಥಳೀಯ ಸಂಸ್ಥೆಯ ಅಧಿಕಾರಿಗಳು ಅಥವಾ ಜನನ ಮತ್ತು ಮರಣ ನೋಂದಣಾಧಿಕಾರಿಗಳಿಂದ ವಿತರಿಸಿದ ಪ್ರಮಾಣ ಪತ್ರ ಅಥವಾ ಸರ್ಕಾರಿ ಆಸ್ಪತ್ರೆ/ಇಎಸ್‌ಐ ಆಸ್ಪತ್ರೆ/ಸ್ಥಳೀಯ ಸಂಸ್ಥೆಗಳ ಆಸ್ಪತ್ರೆ ಅಥವಾ ನೋಂದಾಯಿತ ಎಂಬಿಬಿಎಸ್, ಆಯುರ್ವೇದ, ಯುನಾನಿ ಅಥವಾ ಹೋಮಿಯೋಪತಿ ವೈದ್ಯರು, ನೋಂದಾಯಿತ ಖಾಸಗಿ ಬಿ.ಡಿ.ಎಸ್ ವಿದ್ಯಾರ್ಹತೆ ಹೊಂದಿದ ದಂತ ವೈದ್ಯರಿಂದ ಪ್ರಮಾಣ ಪತ್ರ ಇವುಗಳಲ್ಲಿ ಯಾವುದಾದರೊಂದು ದಾಖಲೆ.

**2. ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿ:**

ಈ ಮಂಡಳಿಯು ಜಾರಿಗೊಳಿಸುತ್ತಿರುವ "ಅಂಬೇಡ್ಕರ್ ಕಾರ್ಮಿಕ ಸಹಾಯ ಹಸ್ತ ಯೋಜನೆ"ಯಡಿ, 11 ವರ್ಗಗಳ ಅಸಂಘಟಿತ ಕಾರ್ಮಿಕರಾದ "ಹಮಾಲರು, ಗೃಹ ಕಾರ್ಮಿಕರು, ಟೈಲರ್ಸ್, ಚಿಂದಿ ಆಯುವವರು, ಮೆಕ್ಯಾನಿಕ್ಸ್, ಅಗಸರು, ಕ್ಷೌರಿಕರು, ಅಕ್ಕಸಾಲಿಗರು, ಕಮ್ಮಾರರು, ಕುಂಬಾರರು ಹಾಗೂ ಭಟ್ಟಿ ಕಾರ್ಮಿಕ ನೋಂದಣಿ ಮಾಡಿಕೊಂಡು ಸ್ಮಾರ್ಟ್‌ಕಾರ್ಡ್ ವಿತರಿಸಲಾಗುತ್ತಿದ್ದು, ಈ ಕೆಳಕಂಡ ಮಾರ್ಗಸೂಚಿಗಳನ್ನು ಅನುಸರಿಸಲಾಗುತ್ತಿದೆ.

**ಮಾನದಂಡ:-**

- ಈ ಯೋಜನೆಯು ಕರ್ನಾಟಕ ರಾಜ್ಯಕ್ಕೆ ಮಾತ್ರ ಅನ್ವಯಿಸುತ್ತದೆ.
- ವಯೋಮಿತಿ 18 ರಿಂದ 60 ವರ್ಷಗಳು.

| | | |
|---|---|---|
| | | • ಪ್ರಸ್ತುತ ಮೇಲ್ಕಂಡ 11 ವರ್ಗಗಳ ಅಸಂಘಟಿತ ಕಾರ್ಮಿಕರಿಗೆ ಅನ್ವಯಿಸುತ್ತದೆ.<br><br>**ಅನುಸರಿಸಬೇಕಾದ ಕ್ರಮಗಳು:**<br>• ಮಂಡಳಿಯ www.ksuwssb.karnataka.gov.in ಪೋರ್ಟಲ್ ನಿಗದಿತ ಅರ್ಜಿ ನಮೂನೆಯಲ್ಲಿ ಈ ಕೆಳಕಂಡ ಅಗತ್ಯ ದಾಖಲೆಗಳೊಂದಿಗೆ ಮಾಹಿತಿಯನ್ನು ಆನ್‌ಲೈನ್‌ನಲ್ಲಿ ಭರ್ತಿ ಮಾಡುವುದು.<br>• ಪಾಸ್‌ಪೋರ್ಟ್ ಅಳತೆಯ ಇತ್ತೀಚಿನ ಭಾವಚಿತ್ರ (ಅಪ್‌ಲೋಡ್ ಮಾಡುವುದು).<br>• ವಯಸ್ಸಿನ ಪ್ರಮಾಣ ಪತ್ರ (ಶಾಲಾ ದಾಖಲೆ, ಜನನ ಪ್ರಮಾಣ ಪತ್ರ, ಚಾಲನಾ ಪರವಾನಿಗೆ, ಪಾಸ್‌ಪೋರ್ಟ್, ಜನ್ಮ ದಿನಾಂಕ ದಾಖಲಿಸಿದ ಆಧಾರ್ ಕಾರ್ಡ್, ಪ್ಯಾನ್ ಕಾರ್ಡ್ ಅಥವಾ ನೋಂದಾಯಿತ ಎಂ.ಬಿ.ಬಿ.ಎಸ್. ವೈದ್ಯರಿಂದ ವಯಸ್ಸಿನ ಪ್ರಮಾಣ ಪತ್ರ ಇವುಗಳಲ್ಲಿ ಯಾವುದಾದರೊಂದು ಪ್ರತಿಯನ್ನು ಅಪ್‌ಲೋಡ್ ಮಾಡುವುದು).<br>• ಆಧಾರ್ ಕಾರ್ಡ್(ಪ್ರತಿಯನ್ನು ಅಪ್‌ಲೋಡ್ ಮಾಡುವುದು).<br>• ಚಾಲ್ತಿಯಲ್ಲಿರುವ ಮೊಬೈಲ್ ಸಂಖ್ಯೆ.<br>• ಬ್ಯಾಂಕ್ ಖಾತೆ ಸಂಖ್ಯೆ, ಬ್ಯಾಂಕ್‌ನ ಹೆಸರು ಹಾಗೂ ಶಾಖೆ ವಿಳಾಸ, ಐ.ಎಫ್.ಎಸ್.ಸಿ ಕೋಡ್ ವಿವರಗಳು ಹಾಗೂ ಬ್ಯಾಂಕ್ ಪಾಸ್ ಪುಸ್ತಕದ ವಿವರ ಪುಟವನ್ನು ಅಪ್‌ಲೋಡ್ ಮಾಡುವುದು.<br>• ನೋಂದಣಿ ಶುಲ್ಕ ರೂ.25/-ಗಳನ್ನು ಆನ್‌ಲೈನ್ (Net Banking, Credit & Dedit Card,UPI) ಮೂಲಕ ಪಾವತಿಸುವುದು.<br>• ಅರ್ಜಿಯನ್ನು ಭರ್ತಿ ಮಾಡಲು ಹಾಗೂ ಸ್ಮಾರ್ಟ್ ಕಾರ್ಡ್ ಪಡೆಯಲು ಕಾರ್ಮಿಕ ಸೇವಾ ಕೇಂದ್ರದಲ್ಲಿರುವ ಕಾರ್ಮಿಕ ಬಂಧುಗಳ ಸಹಾಯ ಪಡೆಯಬಹುದು. |
| ಇ) | ಕಳೆದ ಮೂರು ವರ್ಷಗಳಿಂದ ಇಲ್ಲಿಯವರೆಗೆ ಎಷ್ಟು ಮಂದಿಗೆ ಗುರುತಿನ ಚೀಟಿ ವಿತರಿಸುವ ಹಾಗೂ ನೋಂದಣಿ ಮಾಡುವ ಪ್ರಕ್ರಿಯೆಯನ್ನು ನಡೆಸಲಾಗಿದೆ; (ಜಿಲ್ಲಾವಾರು ಮಾಹಿತಿ ನೀಡುವುದು) | **1. ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿ:**<br>ಈ ಮಂಡಳಿಯಲ್ಲಿ ಕಳೆದ ಮೂರು ವರ್ಷಗಳಲ್ಲಿ (2018-19, 2019-20 ಮತ್ತು 2020-21ರವರೆಗೆ) ಒಟ್ಟು **11,93,967** ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರನ್ನು ಗುರುತಿಸಿ ನೋಂದಣಿ ಮಾಡಿ ಗುರುತಿನ ಚೀಟಿಯನ್ನು ನೀಡಲಾಗಿರುತ್ತದೆ. ಜಿಲ್ಲಾವಾರು ವಿವರವನ್ನು **ಅನುಬಂಧ-01** ರಲ್ಲಿ ಲಗತ್ತಿಸಿದೆ. |

|  |  |  |
| --- | --- | --- |
|  |  | **2. ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿ:**<br>ಈ ಮಂಡಳಿಯಿಂದ "ಅಂಬೇಡ್ಕರ್ ಕಾರ್ಮಿಕ ಸಹಾಯ ಹಸ್ತ ಯೋಜನೆ"ಯಡಿ, 11 ಅಸಂಘಟಿತ ವರ್ಗಗಳ 1,63,519 ಅಸಂಘಟಿತ ಕಾರ್ಮಿಕರನ್ನು ನೊಂದಾಯಿಸಲಾಗಿದ್ದು ಜಿಲ್ಲಾವಾರು ವಿವರವನ್ನು**ಅನುಬಂಧ-02 ರಲ್ಲಿ** ಲಗತ್ತಿಸಿದೆ. |
| ಈ) | ಗುರುತಿನ ಚೀಟಿ ಹೊಂದಿದ ಕಾರ್ಮಿಕರಿಗೆ ಸರ್ಕಾರದಿಂದ ಯಾವ ಸೌಲಭ್ಯಗಳನ್ನು ಒದಗಿಸಲಾಗುತ್ತಿದೆ? | **1. ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿ:**<br>ಈ ಮಂಡಳಿಯಿಂದ ಕಟ್ಟಡ ಮತ್ತು ಇತರೆ ನಿರ್ಮಾಣ (ಉದ್ಯೋಗದ ಕ್ರಮೀಕರಣ ಮತ್ತು ಸೇವಾ ಷರತ್ತುಗಳು) ಕರ್ನಾಟಕ ನಿಯಮಗಳು 2006 ರಡಿಯಲ್ಲಿ ನೋಂದಾಯಿಸಿಕೊಂಡು ಅವರಿಗೆ ಮತ್ತು ಅವರ ಅವಲಂಬಿತರಿಗಾಗಿ 19 ರೀತಿಯ ಕಲ್ಯಾಣ ಮತ್ತು ಸಾಮಾಜಿಕ ಭದ್ರತಾ ಸೌಲಭ್ಯಗಳನ್ನು ರೂಪಿಸಿ ಮಂಡಳಿಯಿಂದ ಅನುಷ್ಠಾನಗೊಳಿಸಲಾಗುತ್ತಿದೆ. ವಿವರವನ್ನು **ಅನುಬಂಧ-03ರಲ್ಲಿ** ಲಗತ್ತಿಸಿದೆ.<br><br>**2. ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿ:**<br>ಈ ಮಂಡಳಿಯಿಂದ ಪ್ರಸ್ತುತ ಗುರುತಿನ ಚೀಟಿ ಪಡೆದುಕೊಂಡ ಮೇಲ್ಕಂಡ 11 ವರ್ಗಗಳ ಕಾರ್ಮಿಕರಿಗೆ ಈ ಮಂಡಳಿಯ ಮೂಲಕ ಪ್ರಸ್ತುತ ಯಾವುದೇ ಸೌಲಭ್ಯವನ್ನು ನೀಡುತ್ತಿಲ್ಲ. |

**ಕಾಇ 138 ಎಲ್‌ಇಟಿ 2021**

(ಅರಬೈಲ್ ಶಿವರಾಂ ಹೆಬ್ಬಾರ್)
ಕಾರ್ಮಿಕ ಸಚಿವರು

# ಅನುಬಂಧ-1

## (ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 3648 )

## ಕರ್ನಾಟಕ ಕಟ್ಟಡ ಮತ್ತುಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿ

| ಮಂಡಳಿಯಲ್ಲಿ ಕಳೆದ ಮೂರು ವರ್ಷಗಳಲ್ಲಿ (2018-19, 2019-20 ಮತ್ತು 2020-21) ನೋಂದಣಿಯಾದ ಕಾರ್ಮಿಕರ ಜಿಲ್ಲಾವಾರು ವಿವರ | | |
|---|---|---|
| ಕ್ರ.ಸಂ | ಜಿಲ್ಲೆ | ನೋಂದಣಿಯಾದ ಕಾರ್ಮಿಕರ ಸಂಖ್ಯೆ |
| 1 | ಬಾಗಲಕೋಟೆ | 32604 |
| 2 | ಬೆಂಗಳೂರು ಗ್ರಾಮಾಂತರ | 8384 |
| 3 | ಬೆಂಗಳೂರು ನಗರ | 103317 |
| 4 | ಬೆಳಗಾಂ | 61498 |
| 5 | ಬಳ್ಳಾರಿ | 40499 |
| 6 | ಬೀದರ್ | 97603 |
| 7 | ವಿಜಯಪುರ | 41817 |
| 8 | ಚಾಮರಾಜನಗರ | 20078 |
| 9 | ಚಿಕ್ಕಬಳ್ಳಾಪುರ | 14912 |
| 10 | ಚಿಕ್ಕಮಗಳೂರು | 33021 |
| 11 | ಚಿತ್ರದುರ್ಗ | 40593 |
| 12 | ದಕ್ಷಿಣ ಕನ್ನಡ | 28555 |
| 13 | ದಾವಣಗೆರೆ | 56320 |
| 14 | ಧಾರವಾಡ | 43620 |
| 15 | ಗದಗ | 18999 |
| 16 | ಕಲಬುರಗಿ | 105434 |
| 17 | ಹಾಸನ | 23625 |
| 18 | ಹಾವೇರಿ | 73282 |
| 19 | ಕೊಡಗು | 2421 |
| 20 | ಕೋಲಾರ | 44644 |
| 21 | ಕೊಪ್ಪಳ | 38815 |
| 22 | ಮಂಡ್ಯ | 9548 |
| 23 | ಮೈಸೂರು | 41286 |
| 24 | ರಾಯಚೂರು | 21326 |
| 25 | ರಾಮನಗರ | 15886 |
| 26 | ಶಿವಮೊಗ್ಗ | 54949 |
| 27 | ತುಮಕೂರು | 33510 |
| 28 | ಉಡುಪಿ | 17036 |
| 29 | ಉತ್ತರ ಕನ್ನಡ | 32844 |
| 30 | ಯಾದಗಿರಿ | 37541 |
| | **ಒಟ್ಟು** | **11,93,967** |

# ಅನುಬಂಧ-2

## (ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 3648 )

### ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿ

### ಅಂಬೇಡ್ಕರ್ ಕಾರ್ಮಿಕ ಸಹಾಯ ಹಸ್ತ ಯೋಜನೆಯಡಿ ಜಿಲ್ಲಾವಾರು ನೋಂದಣಿಯ ವಿವರ

| ಜಿಲ್ಲೆ ಹೆಸರು | ನೋಂದಣಿ ಸಂಖ್ಯೆ |
|---|---|
| ಬಾಗಲಕೋಟೆ | 4324 |
| ಬೆಂಗಳೂರು ನಗರ | 19119 |
| ಬೆಂಗಳೂರು ಗ್ರಾಮಾಂತರ | 569 |
| ಬೆಳಗಾವಿ | 11398 |
| ಬಳ್ಳಾರಿ | 4767 |
| ಬೀದರ್ | 2260 |
| ಬಿಜಾಪುರ | 3396 |
| ಚಾಮರಾಜನಗರ | 3283 |
| ಚಿಕ್ಕಬಳ್ಳಾಪುರ | 1706 |
| ಚಿಕ್ಕಮಗಳೂರು | 2870 |
| ಚಿತ್ರದುರ್ಗ | 4949 |
| ದಕ್ಷಿಣ-ಕನ್ನಡ | 4738 |
| ದಾವಣಗೆರೆ | 6972 |
| ಧಾರವಾಡ | 2662 |
| ಗದಗ | 2947 |
| ಗುಲ್ಬರ್ಗ | 2562 |
| ಹಾಸನ | 2691 |
| ಹಾವೇರಿ | 3176 |
| ಕೊಡಗು | 3261 |
| ಕೋಲಾರ | 1372 |
| ಕೊಪ್ಪಳ | 3760 |
| ಮಂಡ್ಯ | 5011 |
| ಮೈಸೂರು | 6491 |
| ರಾಯಚೂರು | 4343 |
| ರಾಮನಗರ | 1639 |
| ಶಿವಮೊಗ್ಗ | 5002 |
| ತುಮಕೂರು | 5222 |
| ಉಡುಪಿ | 2383 |
| ಉತ್ತರ-ಕನ್ನಡ | 38755 |
| ಯಾದಗಿರಿ | 1891 |
| ಒಟ್ಟು | **163519** |

# ಅನುಬಂಧ-3

## (ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 3648 )

### ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿ ವತಿಯಿಂದ ಫಲಾನುಭವಿಗಳಿಗೆ ಸಿಗುವ ಸೌಲಭ್ಯಗಳು

1. ಪಿಂಚಣಿ ಸೌಲಭ್ಯ: ಮೂರು ವರ್ಷ ಸದಸ್ಯತ್ವದೊಂದಿಗೆ 60 ವರ್ಷ ಪೂರೈಸಿದ ಫಲಾನುಭವಿಗೆ ಮಾಸಿಕ ರೂ.2,000/-
2. ಕುಟುಂಬ ಪಿಂಚಣಿ ಸೌಲಭ್ಯ: ಮೃತ ಪಿಂಚಣಿದಾರರ ಪತಿ / ಪತ್ನಿ ಮಾಸಿಕ ರೂ.1000/-
3. ದುರ್ಬಲತೆ ಪಿಂಚಣಿ: ನೋಂದಾಯಿತ ಫಲಾನುಭವಿಯು ಖಾಯಿಲೆಗಳಿಂದ ಅಥವಾ ಕಟ್ಟಡ ಕಾಮಗಾರಿಗಳ ಅಪಘಾತದಿಂದ ಶಾಶ್ವತ/ಭಾಗಶಃ ಅಂಗವಿಕಲತೆ ಹೊಂದಿದ್ದರೆ ಮಾಸಿಕ ರೂ.2,000/- ಪಿಂಚಣಿ ಹಾಗೂ ಶೇಕಡವಾರು ದುರ್ಬಲತೆಯನ್ನಾಧರಿಸಿ ರೂ.2,00,000/- ದವರೆಗೆ ಅನುಗ್ರಹ ರಾಶಿ ಸಹಾಯಧನ.
4. ಕನ್ನಡಕ, ಶ್ರವಣಯಂತ್ರ, ಕೃತಕ ಕೈಕಾಲು ಮತ್ತು ಗಾಲಿ ಕುರ್ಚಿ ಮರುಪಾವತಿ ಸೌಲಭ್ಯ.
5. ಟ್ರೈನಿಂಗ್-ಕಮ್-ಟೂಲ್‌ಕಿಟ್‌ಸೌಲಭ್ಯ (ಶ್ರಮ ಸಾಮರ್ಥ್ಯ) : ರೂ.30,000/- ವರೆಗೆ
6. ಶ್ರಮ ಸಂಸಾರ ಸಾಮರ್ಥ್ಯ ತರಬೇತಿ ಸೌಲಭ್ಯ: ನೋಂದಾಯಿತ ಫಲಾನುಭವಿಯ ಅವಲಂಭಿತರಿಗೆ
7. ವಸತಿ ಸೌಲಭ್ಯ (ಕಾರ್ಮಿಕ ಗೃಹ ಭಾಗ್ಯ): ರೂ.2,00,000/- ದವರೆಗೆ ಮುಂಗಡ ಸೌಲಭ್ಯ
8. ಹೆರಿಗೆ ಸೌಲಭ್ಯ (ತಾಯಿ ಲಕ್ಷ್ಮೀ ಬಾಂಡ್): ಮಹಿಳಾ ಫಲಾನುಭವಿಯ ಮೊದಲ ಎರಡು ಮಕ್ಕಳಿಗೆ ಹೆಣ್ಣು ಮಗುವಿನ ಜನನಕ್ಕೆ ರೂ. 30,000/- ಮತ್ತು ಗಂಡು ಮಗುವಿನ ಜನನಕ್ಕೆ ರೂ.20,000/-
9. ಶಿಶು ಪಾಲನಾ ಸೌಲಭ್ಯ:
10. ಅಂತ್ಯಕ್ರಿಯೆ ವೆಚ್ಚ : ರೂ.4,000/- ಹಾಗೂ ಅನುಗ್ರಹ ರಾಶಿ ರೂ.50,000/-ಸಹಾಯಧನ
11. ಶೈಕ್ಷಣಿಕ ಸಹಾಯಧನ (ಕಲಿಕೆ ಭಾಗ್ಯ): ಫಲಾನುಭವಿಯ ಇಬ್ಬರು ಮಕ್ಕಳ ವಿದ್ಯಾಭ್ಯಾಸಕ್ಕಾಗಿ:

| ಕ್ರಸಂ | ತರಗತಿ (ಉತ್ತೀರ್ಣಕ್ಕೆ) | ವಾರ್ಷಿಕ ಸಹಾಯ ಧನ | |
|---|---|---|---|
| | | ಗಂಡು | ಹೆಣ್ಣು |
| I. | ನರ್ಸರಿ | 3,000 | 4,000 |
| II. | 1 ರಿಂದ 4ನೇ ತರಗತಿ | 3,000 | 4,000 |
| III. | 5 ರಿಂದ 8ನೇ ತರಗತಿ | 5,000 | 6,000 |
| IV. | 9 ಹಾಗೂ 10ನೇ ತರಗತಿ | 10,000 | 11,000 |
| V. | ಪ್ರಥಮ ಪಿಯುಸಿ ಮತ್ತು ದ್ವಿತೀಯ ಪಿ.ಯು.ಸಿ | 10,000 | 14,000 |
| VI. | ಐಟಿಐ | 12,000 | 15,000 |
| VII. | ಪದವಿ ಪ್ರತಿ ವರ್ಷಕ್ಕೆ | 15,000 | 20,000 |
| VIII. | ಸ್ನಾತಕೋತ್ತರ ಪದವಿ ಸೇರ್ಪಡೆಗೆ | 20,000 | 20,000 |
| | ಮತ್ತು ಪ್ರತಿ ವರ್ಷಕ್ಕೆ | 20,000 | 25,000 |
| IX. | ಇಂಜಿನಿಯರಿಂಗ್ ಕೋರ್ಸ್ ಬಿಇ/ ಬಿ.ಟೆಕ್ ಸೇರ್ಪಡೆಗೆ | 25,000 | 25,000 |
| | ಮತ್ತು ಪ್ರತಿ ವರ್ಷಕ್ಕೆ | 25,000 | 30,000 |
| X. | ವೈದ್ಯಕೀಯ ಕೋರ್ಸ್‌ಗೆ ಸೇರ್ಪಡೆಗೆ | 30,000 | 30,000 |
| | ಮತ್ತು ಪ್ರತಿ ವರ್ಷಕ್ಕೆ | 40,000 | 50,000 |
| XI. | ಡಿಪ್ಲೋಮಾ | 15,000 | 20,000 |
| XII. | ಎಂ.ಟೆಕ್ / ಎಂ.ಇ | 30,000 | 35,000 |
| XIII. | ಎಂ.ಡಿ (ವೈದ್ಯಕೀಯ) | 45,000 | 55,000 |
| XIV. | ಪಿಹೆಚ್‌ಡಿ (ಪ್ರತಿ ವರ್ಷಕ್ಕೆ) ಗರಿಷ್ಠ 03 ವರ್ಷ | 25,000 | 30,000 |

12. ವೈದ್ಯಕೀಯ ಸಹಾಯಧನ (ಕಾರ್ಮಿಕ ಆರೋಗ್ಯ ಭಾಗ್ಯ): ನೋಂದಾಯಿತ ಫಲಾನುಭವಿ ಹಾಗೂ ಅವರ ಅವಲಂಭಿತರಿಗೆ **ರೂ.300/-** ರಿಂದ **ರೂ.10,000/-**ವರೆಗೆ
13. **ಅಪಘಾತ ಪರಿಹಾರ:** ಮರಣ ಹೊಂದಿದ್ದಲ್ಲಿ **ರೂ.5,00,000/-**, ಸಂಪೂರ್ಣ ಶಾಶ್ವತ ದುರ್ಬಲತೆಯಾದಲ್ಲಿ **ರೂ.2,00,000/-** ಮತ್ತು ಭಾಗಶಃ ಶಾಶ್ವತ ದುರ್ಬಲತೆಯಾದಲ್ಲಿ **ರೂ.1,00,000/-**
14. **ಪ್ರಮುಖ ವೈದ್ಯಕೀಯ ವೆಚ್ಚ ಸಹಾಯಧನ (ಕಾರ್ಮಿಕ ಚಿಕಿತ್ಸಾ ಭಾಗ್ಯ):** ಹೃದ್ರೋಗ, ಕಿಡ್ನಿ ಜೋಡಣೆ, ಕ್ಯಾನ್ಸರ್ ಶಸ್ತ್ರಚಿಕಿತ್ಸೆ, ಕಣ್ಣಿನ ಶಸ್ತ್ರಚಿಕಿತ್ಸೆ, ಪಾರ್ಶ್ವವಾಯು, ಮೂಳೆ ಶಸ್ತ್ರಚಿಕಿತ್ಸೆ, ಗರ್ಭಕೋಶ ಶಸ್ತ್ರಚಿಕಿತ್ಸೆ, ಅಸ್ತಮ ಚಿಕಿತ್ಸೆ, ಗರ್ಭಪಾತ ಪ್ರಕರಣಗಳು, ಪಿತ್ತಕೋಶದ ತೊಂದರೆಗೆ ಸಂಬಂಧಿತ ಚಿಕಿತ್ಸೆ, ಮೂತ್ರ ಪಿಂಡದಲ್ಲಿನ ಕಲ್ಲು ತೆಗೆಯುವ ಚಿಕಿತ್ಸೆ, ಮೆದುಳಿನ ರಕ್ತಸ್ರಾವದ ಚಿಕಿತ್ಸೆ, ಅಲ್ಸರ್ ಚಿಕಿತ್ಸೆ, ಡಯಾಲಿಸಿಸ್ ಚಿಕಿತ್ಸೆ, ಕಿಡ್ನಿ ಶಸ್ತ್ರಚಿಕಿತ್ಸೆ, ಇ.ಎನ್.ಟಿ. ಚಿಕಿತ್ಸೆ ಮತ್ತು ಶಸ್ತ್ರಚಿಕಿತ್ಸೆ, ನರರೋಗ ಶಸ್ತ್ರಚಿಕಿತ್ಸೆ, ವ್ಯಾಸ್ಕ್ಯೂಲರ್ ಶಸ್ತ್ರಚಿಕಿತ್ಸೆ, ಅನ್ನನಾಳದ ಚಿಕಿತ್ಸೆ ಮತ್ತು ಶಸ್ತ್ರಚಿಕಿತ್ಸೆ, ಕರುಳಿನ ಶಸ್ತ್ರಚಿಕಿತ್ಸೆ, ಸ್ತನ ಸಂಬಂಧಿತ ಚಿಕಿತ್ಸೆ ಮತ್ತು ಶಸ್ತ್ರಚಿಕಿತ್ಸೆ, ಹರ್ನಿಯ ಶಸ್ತ್ರಚಿಕಿತ್ಸೆ, ಅಪೆಂಡಿಕ್ಸ್ ಶಸ್ತ್ರಚಿಕಿತ್ಸೆ, ಮೂಳೆ ಮುರಿತ/ಡಿಸ್‌ಲೊಕೇಶನ್ ಚಿಕಿತ್ಸೆ, ಇತರೆ ಔದ್ಯೋಗಿಕ ಖಾಯಿಲೆಗಳ ಚಿಕಿತ್ಸೆಗಳಿಗೆ **ರೂ.2,00,000/-**ವರೆಗೆ
15. **ಮದುವೆ ಸಹಾಯಧನ (ಗೃಹ ಲಕ್ಷ್ಮೀ ಬಾಂಡ್):** ಫಲಾನುಭವಿ ಅಥವಾ ಅವರ ಇಬ್ಬರು ಮಕ್ಕಳ ಮದುವೆಗೆ ತಲಾ **ರೂ.50,000/-**
16. **ಸಂಪರ್ಕ ಸೌಲಭ್ಯ (ಕಾರ್ಮಿಕ ಅನಿಲ ಭಾಗ್ಯ):** ಅನಿಲ ಸಂಪರ್ಕದೊಂದಿಗೆಎರಡು ಬರ್ನರ್ ಸ್ಟೌವ್
17. **ಬಿಎಂಟಿಸಿ ಬಸ್ ಪಾಸ್ ಸೌಲಭ್ಯ:** ಬೆಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಯಲ್ಲಿ ಕೆಲಸ ಮಾಡುತ್ತಿರುವಂತಹ / ವಾಸಸ್ಥಳದಿಂದ ಬೆಂಗಳೂರಿಗೆ ಪ್ರಯಾಣಿಸುವ ನೋಂದಾಯಿತ ಕಟ್ಟಡ ಕಾರ್ಮಿಕರಿಗೆ
18. **ಕೆಎಸ್‌ಆರ್‌ಟಿಸಿ ಬಸ್ ಪಾಸ್‌ನ ಸೌಲಭ್ಯ:** ರಾಜ್ಯದಾದ್ಯಂತ ವಿದ್ಯಾಭ್ಯಾಸದಲ್ಲಿ ತೊಡಗಿರುವ ನೋಂದಾಯಿತ ಕಾರ್ಮಿಕರ ಇಬ್ಬರು ಮಕ್ಕಳಿಗೆ (ಈ ಯೋಜನೆಯನ್ನು ಜಾರಿಗೊಳಿಸಲಾಗುತ್ತಿದೆ)
19. **ತಾಯಿ ಮಗು ಸಹಾಯ ಹಸ್ತ:** ಮಹಿಳಾ ಫಲಾನುಭವಿಯು ಮಗುವಿಗೆ ಜನ್ಮ ನೀಡಿದ ಸಂದರ್ಭದಲ್ಲಿ ಆಕೆಯ ಮಗುವಿನ ಶಾಲಾ ಪೂರ್ವ ಶಿಕ್ಷಣ ಮತ್ತು ಪೌಷ್ಠಿಕತೆಗಾಗಿ ಮಗುವಿಗೆ ಮೂರು ವರ್ಷಗಳು ತುಂಬುವವರೆಗೆ ವಾರ್ಷಿಕ **ರೂ.6,000/-** ಗಳ ಸಹಾಯಧನ.

## ಕರ್ನಾಟಕ ಸರ್ಕಾರ

ಸಂಖ್ಯೆ: ಎಲ್‌ಡಿ–ಎಲ್‌ಇಟಿ/144/2021

ಕರ್ನಾಟಕ ಸರ್ಕಾರ ಸಚಿವಾಲಯ,
ವಿಕಾಸ ಸೌಧ,
ಬೆಂಗಳೂರು, ದಿನಾಂಕ:20–03–2021.

**ಇವರಿಂದ,**

ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ,
ಕಾರ್ಮಿಕ ಇಲಾಖೆ.
ವಿಕಾಸ ಸೌಧ, ಬೆಂಗಳೂರು–560 001.

**ಇವರಿಗೆ,**

ಕಾರ್ಯದರ್ಶಿ,
ಕರ್ನಾಟಕ ವಿಧಾನ ಸಭೆ,
ವಿಧಾನಸೌಧ, ಬೆಂಗಳೂರು.

**ಮಾನ್ಯರೇ,**

ವಿಷಯ:- ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀಮತಿ ಸೌಮ್ಯ ರೆಡ್ಡಿ (ಜಯನಗರ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 3657ಕ್ಕೆ ಉತ್ತರಗಳನ್ನು ಒದಗಿಸುವ ಬಗ್ಗೆ

******

ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀಮತಿ ಸೌಮ್ಯ ರೆಡ್ಡಿ (ಜಯನಗರ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 3657ಕ್ಕೆ ಸಂಬಂಧಿಸಿದ ಉತ್ತರದ 20 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಮುಂದಿನ ಸೂಕ್ತ ಕ್ರಮಕ್ಕಾಗಿ ತಮಗೆ ಕಳುಹಿಸಿಕೊಡಲು ನಿರ್ದೇಶಿತನಾಗಿದ್ದೇನೆ.

ತಮ್ಮ ನಂಬುಗೆಯ,

(ಪ್ರದೀಪ್ ಕುಮಾರ್ ಬಿ.ಎಸ್)
ಸರ್ಕಾರದ ಅಧೀನ ಕಾರ್ಯದರ್ಶಿ
ಕಾರ್ಮಿಕ ಇಲಾಖೆ.
22/3

# ಕರ್ನಾಟಕ ವಿಧಾನ ಸಭೆ

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 3657
2. ಮಾನ್ಯ ಸದಸ್ಯರ ಹೆಸರು : ಶ್ರೀಮತಿ ಸೌಮ್ಯ ರೆಡ್ಡಿ (ಜಯನಗರ)
3. ಉತ್ತರಿಸಬೇಕಾದ ದಿನಾಂಕ : 25/3/2021
4. ಉತ್ತರಿಸುವವರು : ಮಾನ್ಯ ಕಾರ್ಮಿಕ ಸಚಿವರು

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಅಸಂಘಟಿತ ಕಾರ್ಮಿಕರ ಭವಿಷ್ಯನಿಧಿ (ಪಿ.ಎಫ್) ಯೋಜನೆಗೆ ಹಣ ಮೀಸಲಿಡುವುದು ಮತ್ತು ಅವರಿಗೆ ಅಸಂಘಟಿತ ಕಾರ್ಮಿಕರ ಕಲ್ಯಾಣ ಮಂಡಳಿಯ ಗುರುತಿನ ಚೀಟಿ ಒದಗಿಸುವುದರ ಬಗ್ಗೆ ಸರ್ಕಾರ ಕೈಗೊಂಡಿರುವ ಕ್ರಮವೇನು: | ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿಯ ಮೂಲಕ 11 ವರ್ಗಗಳ ಅಸಂಘಟಿತ ಕಾರ್ಮಿಕರಾದ ಹಮಾಲರು, ಚಿಂದಿ ಆಯುವವರು, ಮನೆಗೆಲಸದವರು, ಟೈಲರ್‌ಗಳು, ಮೆಕ್ಯಾನಿಕ್, ಅಗಸರು, ಕ್ಷೌರಿಕರು, ಅಕ್ಕಸಾಲಿಗರು, ಕಮ್ಮಾರರು, ಕುಂಬಾರರು ಹಾಗೂ ಭಟ್ಟಿಕಾರ್ಮಿಕರಿಗೆ ಪಿ.ಎಫ್ ಯೋಜನೆಯನ್ನು ಜಾರಿಗೊಳಿಸುವ ಕುರಿತು ಸರ್ಕಾರದ ಆದೇಶ ಸಂಖ್ಯೆ:ಕಾಇ 150 ಎಲ್‌ಇಟಿ 2018, ದಿನಾಂಕ:27-12-2018 ರ ಕ್ರಿಯಾ ಯೋಜನೆರನ್ವಯ 2018-19ನೇ ಸಾಲಿನಲ್ಲಿ ರೂ.14.00 ಕೋಟಿಗಳ ಅನುದಾನವನ್ನು ಮೀಸಲಿಡಲಾಗಿದ್ದು, ಸದರಿ ಯೋಜನೆಯನ್ನು ಸಮರ್ಪಕವಾಗಿ ಜಾರಿಗೊಳಿಸಲು ಅಗತ್ಯ ಕ್ರಮಗಳನ್ನು ಸಹ ಕೈಗೊಳ್ಳಲಾಗಿತ್ತು. ಆದರೆ, 2019 ರಲ್ಲಿ ಕೇಂದ್ರ ಸರ್ಕಾರವು ಎಲ್ಲಾ ಅಸಂಘಟಿತ ವರ್ಗಗಳ ಕಾರ್ಮಿಕರಿಗಾಗಿ **"ಪ್ರಧಾನ ಮಂತ್ರಿ ಶ್ರಮ್ ಯೋಗಿ ಮಾನ್-ಧನ್ ಯೋಜನೆ"** ಎನ್ನುವ ವಂತಿಕೆ ಆಧಾರಿತ ಪಿಂಚಣಿ ಯೋಜನೆಯನ್ನು ಜಾರಿಗೊಳಿಸಿದ ಹಿನ್ನೆಲೆಯಲ್ಲಿ, ಒಂದೇ ಮಾದರಿಯ 2 ಸೌಲಭ್ಯಗಳು ಒದಗಿಸಿದಂತಾಗುತ್ತದೆ ಎಂಬ ಕಾರಣದಿಂದ ರಾಜ್ಯ ಸರ್ಕಾರದ ಪಿ.ಎಫ್ (ಭವಿಷ್ಯನಿಧಿ) ಯೋಜನೆಯನ್ನು ಕೈಬಿಡಲಾಗಿರುತ್ತದೆ.<br><br>ಮೇಲೆ ತಿಳಿಸಲಾದ 11 ವರ್ಗಗಳ ಅಸಂಘಟಿತ ಕಾರ್ಮಿಕರನ್ನು ಮಂಡಳಿಯಲ್ಲಿ **"ಅಂಬೇಡ್ಕರ್ ಕಾರ್ಮಿಕ ಸಹಾಯ ಹಸ್ತ ಯೋಜನೆ"**ಯಡಿ ನೋಂದಾಯಿಸಿ, ಸ್ಮಾರ್ಟ್ ಕಾರ್ಡ್ ಅನ್ನು ವಿತರಿಸಲಾಗುತ್ತಿದೆ. ಈವರೆಗೂ 1,63,519 ಕಾರ್ಮಿಕರನ್ನು ನೋಂದಾಯಿಸಲಾಗಿರುತ್ತದೆ. ಪ್ರಸ್ತುತ ನೋಂದಣಿ ಪ್ರಕ್ರಿಯೆಯನ್ನು ಆನ್‌ಲೈನ್ ಮೂಲಕ ಕೈಗೊಳ್ಳಲಾಗುತ್ತಿದೆ. |
| ಆ) | ಅಸಂಘಟಿತ ಕಾರ್ಮಿಕರ ಹಾಗೂ ಆಟೋ ಚಾಲಕರಿಗೆ ಅಪಘಾತ ಮತ್ತು ಮರಣ ಹೊಂದಿದಾಗ ಸದರಿ ಕುಟುಂಬದವರಿಗೆ ಪರಿಹಾರ ಧನ ಒದಗಿಸುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ: | ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿಯ ಮೂಲಕ ಆಟೋ ಚಾಲಕರು ಸೇರಿದಂತೆ ಕರ್ನಾಟಕ ರಾಜ್ಯದ ಎಲ್ಲಾ ಖಾಸಗಿ ವಾಣಿಜ್ಯ ಸಾರಿಗೆ ಕಾರ್ಮಿಕರಿಗೆ ಅಪಘಾತ ಪರಿಹಾರ ಒದಗಿಸುವ **"ಕರ್ನಾಟಕ ರಾಜ್ಯ ಖಾಸಗಿ ವಾಣಿಜ್ಯ ಸಾರಿಗೆ ಕಾರ್ಮಿಕರ ಅಪಘಾತ ಪರಿಹಾರ ಯೋಜನೆ"**ಯನ್ನು 2011-12ನೇ ಸಾಲಿನಲ್ಲೇ |

| | | |
|---|---|---|
| | | ಜಾರಿಗೊಳಿಸಲಾಗಿದೆ. ಈ ಯೋಜನೆಯಡಿ ಅಪಘಾತಗೊಂಡ ಫಲಾನುಭವಿಗಳಿಗೆ ಈ ಕೆಳಕಂಡ ಸೌಲಭ್ಯಗಳನ್ನು ನೀಡಲಾಗುತ್ತಿದೆ.<br>• ಅಪಘಾತದಿಂದ ಮರಣಹೊಂದಿದ ಪ್ರಕರಣಗಳಲ್ಲಿ ಮೃತರ ನಾಮ ನಿರ್ದೇಶಿತರಿಗೆ ರೂ.5 ಲಕ್ಷ ಪರಿಹಾರ.<br>• ಅಪಘಾತದಿಂದ ಶಾಶ್ವತ ದುರ್ಬಲತೆ ಹೊಂದಿದಾಗ, ಫಲಾನುಭವಿಗೆ ದುರ್ಬಲತೆಯ ಪ್ರಮಾಣಕ್ಕನುಗುಣವಾಗಿ ರೂ.2 ಲಕ್ಷದ ವರೆಗೆ ಪರಿಹಾರ.<br>• ಅಪಘಾತದಿಂದ ತಾತ್ಕಾಲಿಕ ದುರ್ಬಲತೆ ಹೊಂದಿದಾಗ ರೂ.1.00 ಲಕ್ಷಗಳ ವರೆಗೆ ಆಸ್ಪತ್ರೆ ವೆಚ್ಚ ಮರುಪಾವತಿ.<br>• ಅಪಘಾತದ ಕಾರಣ ನಿಧನರಾದ ಅಥವಾ ಸಂಪೂರ್ಣ ಶಾಶ್ವತ ದುರ್ಬಲತೆ ಹೊಂದಿದ ಫಲಾನುಭವಿಗಳ ಇಬ್ಬರು ಮಕ್ಕಳಿಗೆ ಪದವಿಪೂರ್ವ ವ್ಯಾಸಂಗದವರೆಗೆ ವಾರ್ಷಿಕ 10,000/- ರೂ.ಗಳ ಶೈಕ್ಷಣಿಕ ಧನಸಹಾಯ. |
| ಇ) | ಅವರಿಗೆ ಉಚಿತ ಆರೋಗ್ಯ ಕಾರ್ಡ್ ವಿತರಿಸುವುದು ಮತ್ತು ಅಸಂಘಟಿತ ಕಾರ್ಮಿಕರಿಗೆ ವಸತಿ ಯೋಜನೆ ಕಲ್ಪಿಸುವುದರಲ್ಲಿ ಸರ್ಕಾರವು ಯಾವ ಕ್ರಮವನ್ನು ತೆಗೆದುಕೊಂಡಿದೆ. | ಆಟೋ ಚಾಲಕರಿಗೆ ಉಚಿತ ಆರೋಗ್ಯ ಕಾರ್ಡ್ ವಿತರಿಸುವುದು ಮತ್ತು ಅಸಂಘಟಿತ ಕಾರ್ಮಿಕರಿಗೆ ವಸತಿ ಯೋಜನೆ ಕಲ್ಪಿಸುವ ಯಾವುದೇ ಯೋಜನೆಯನ್ನು ಮಂಡಳಿಯ ಮೂಲಕ ಜಾರಿಗೊಳಿಸುತ್ತಿಲ್ಲ. |
| ಈ) | ಅಸಂಘಟಿತ ಕಾರ್ಮಿಕರ ಮಕ್ಕಳಿಗೆ ವಿದ್ಯಾರ್ಥಿವೇತನ ನೀಡುವ ಚಿಂತನೆ ಸರ್ಕಾರದ ಮುಂದಿದೆಯೇ? | ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿಯು ಜಾರಿಗೊಳಿಸುತ್ತಿರುವ "ಕರ್ನಾಟಕ ರಾಜ್ಯ ಖಾಸಗಿ ವಾಣಿಜ್ಯ ಸಾರಿಗೆ ಕಾರ್ಮಿಕರ ಅಪಘಾತ ಪರಿಹಾರ ಯೋಜನೆ"ಯಡಿ ಅಪಘಾತದ ಕಾರಣ ನಿಧನರಾದ ಅಥವಾ ಸಂಪೂರ್ಣ ಶಾಶ್ವತ ದುರ್ಬಲತೆ ಹೊಂದಿದ ಫಲಾನುಭವಿಗಳ ಇಬ್ಬರು ಮಕ್ಕಳಿಗೆ ಪದವಿಪೂರ್ವ ವ್ಯಾಸಂಗದವರೆಗೆ ವಾರ್ಷಿಕ ತಲಾ 10,000/- ರೂ.ಗಳ ಶೈಕ್ಷಣಿಕ ಧನಸಹಾಯವನ್ನು 2018-19ನೇ ಸಾಲಿನಿಂದ ನೀಡಲಾಗುತ್ತಿದೆ. ಇದನ್ನೂ ಹೊರತುಪಡಿಸಿ ಇತರೆ ಯಾವುದೇ ವರ್ಗಗಳ ಅಸಂಘಟಿತ ಕಾರ್ಮಿಕರ ಮಕ್ಕಳಿಗೆ ವಿದ್ಯಾರ್ಥಿ ವೇತನವನ್ನು ಮಂಡಳಿಯಿಂದ ನೀಡಲಾಗುತ್ತಿಲ್ಲ. |

ಕಾಇ 144 ಎಲ್ಇಟಿ 2021

(ಅರಬೈಲ್ ಶಿವರಾಂ ಹೆಬ್ಬಾರ್)
ಕಾರ್ಮಿಕ ಸಚಿವರು

# ಕರ್ನಾಟಕ ವಿಧಾನ ಸಭೆ

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 3657
2. ಮಾನ್ಯ ಸದಸ್ಯರ ಹೆಸರು : ಶ್ರೀಮತಿ ಸೌಮ್ಯ ರೆಡ್ಡಿ (ಜಯನಗರ)
3. ಉತ್ತರಿಸಬೇಕಾದ ದಿನಾಂಕ : 25/3/2021
4. ಉತ್ತರಿಸುವವರು : ಮಾನ್ಯ ಕಾರ್ಮಿಕ ಸಚಿವರು

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಅಸಂಘಟಿತ ಕಾರ್ಮಿಕರ ಭವಿಷ್ಯನಿಧಿ (ಪಿ.ಎಫ್) ಯೋಜನೆಗೆ ಹಣ ಮೀಸಲಿಡುವುದು ಮತ್ತು ಅವರಿಗೆ ಅಸಂಘಟಿತ ಕಾರ್ಮಿಕರ ಕಲ್ಯಾಣ ಮಂಡಳಿಯ ಗುರುತಿನ ಚೀಟಿ ಒದಗಿಸುವುದರ ಬಗ್ಗೆ ಸರ್ಕಾರ ಕೈಗೊಂಡಿರುವ ಕ್ರಮವೇನು: | ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿಯ ಮೂಲಕ 11 ವರ್ಗಗಳ ಅಸಂಘಟಿತ ಕಾರ್ಮಿಕರಾದ ಹಮಾಲರು, ಚಿಂದಿ ಆಯುವವರು, ಮನೆಗೆಲಸದವರು, ಟೈಲರ್‌ಗಳು, ಮೆಕ್ಯಾನಿಕ್, ಅಗಸರು, ಕ್ಷೌರಿಕರು, ಅಕ್ಕಸಾಲಿಗರು, ಕಮ್ಮಾರರು, ಕುಂಬಾರರು ಹಾಗೂ ಭಟ್ಟಿಕಾರ್ಮಿಕರಿಗೆ ಪಿ.ಎಫ್ ಯೋಜನೆಯನ್ನು ಜಾರಿಗೊಳಿಸುವ ಕುರಿತು ಸರ್ಕಾರದ ಆದೇಶ ಸಂಖ್ಯೆ:ಕಾಇ 150 ಎಲ್ಇಟಿ 2018, ದಿನಾಂಕ:27-12-2018 ರ ಕ್ರಿಯಾ ಯೋಜನೆರನ್ವಯ 2018-19ನೇ ಸಾಲಿನಲ್ಲಿ ರೂ.14.00 ಕೋಟಿಗಳ ಅನುದಾನವನ್ನು ಮೀಸಲಿಡಲಾಗಿದ್ದು, ಸದರಿ ಯೋಜನೆಯನ್ನು ಸಮರ್ಪಕವಾಗಿ ಜಾರಿಗೊಳಿಸಲು ಅಗತ್ಯ ಕ್ರಮಗಳನ್ನು ಸಹ ಕೈಗೊಳ್ಳಲಾಗಿತ್ತು. ಆದರೆ, 2019 ರಲ್ಲಿ ಕೇಂದ್ರ ಸರ್ಕಾರವು ಎಲ್ಲಾ ಅಸಂಘಟಿತ ವರ್ಗಗಳ ಕಾರ್ಮಿಕರಿಗಾಗಿ **"ಪ್ರಧಾನ ಮಂತ್ರಿ ಶ್ರಮ್ ಯೋಗಿ ಮಾನ್-ಧನ್ ಯೋಜನೆ"** ಎನ್ನುವ ವಂತಿಕೆ ಆಧಾರಿತ ಪಿಂಚಣಿ ಯೋಜನೆಯನ್ನು ಜಾರಿಗೊಳಿಸಿದ ಹಿನ್ನೆಲೆಯಲ್ಲಿ, ಒಂದೇ ಮಾದರಿಯ 2 ಸೌಲಭ್ಯಗಳು ಒದಗಿಸಿದಂತಾಗುತ್ತದೆ ಎಂಬ ಕಾರಣದಿಂದ ರಾಜ್ಯ ಸರ್ಕಾರದ ಪಿ.ಎಫ್ (ಭವಿಷ್ಯನಿಧಿ) ಯೋಜನೆಯನ್ನು ಕೈಬಿಡಲಾಗಿರುತ್ತದೆ.<br><br>ಮೇಲೆ ತಿಳಿಸಲಾದ 11 ವರ್ಗಗಳ ಅಸಂಘಟಿತ ಕಾರ್ಮಿಕರನ್ನು ಮಂಡಳಿಯಲ್ಲಿ **"ಅಂಬೇಡ್ಕರ್ ಕಾರ್ಮಿಕ ಸಹಾಯ ಹಸ್ತ ಯೋಜನೆ"**ಯಡಿ ನೋಂದಾಯಿಸಿ, ಸ್ಮಾರ್ಟ್ ಕಾರ್ಡ್ ಅನ್ನು ವಿತರಿಸಲಾಗುತ್ತಿದೆ. ಈವರೆಗೂ 1,63,519 ಕಾರ್ಮಿಕರನ್ನು ನೋಂದಾಯಿಸಲಾಗಿರುತ್ತದೆ. ಪ್ರಸ್ತುತ ನೋಂದಣಿ ಪ್ರಕ್ರಿಯೆಯನ್ನು ಆನ್‌ಲೈನ್ ಮೂಲಕ ಕೈಗೊಳ್ಳಲಾಗುತ್ತಿದೆ. |
| ಆ) | ಅಸಂಘಟಿತ ಕಾರ್ಮಿಕರ ಹಾಗೂ ಆಟೋ ಚಾಲಕರಿಗೆ ಅಪಘಾತ ಮತ್ತು ಮರಣ ಹೊಂದಿದಾಗ ಸದರಿ ಕುಟುಂಬದವರಿಗೆ ಪರಿಹಾರ ಧನ ಒದಗಿಸುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ: | ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿಯ ಮೂಲಕ ಆಟೋ ಚಾಲಕರು ಸೇರಿದಂತೆ ಕರ್ನಾಟಕ ರಾಜ್ಯದ ಎಲ್ಲಾ ಖಾಸಗಿ ವಾಣಿಜ್ಯ ಸಾರಿಗೆ ಕಾರ್ಮಿಕರಿಗೆ ಅಪಘಾತ ಪರಿಹಾರ ಒದಗಿಸುವ **"ಕರ್ನಾಟಕ ರಾಜ್ಯ ಖಾಸಗಿ ವಾಣಿಜ್ಯ ಸಾರಿಗೆ ಕಾರ್ಮಿಕರ ಅಪಘಾತ ಪರಿಹಾರ ಯೋಜನೆ"**ಯನ್ನು 2011-12ನೇ ಸಾಲಿನಲ್ಲೇ |

| | | |
|---|---|---|
| | | ಜಾರಿಗೊಳಿಸಲಾಗಿದೆ. ಈ ಯೋಜನೆಯಡಿ ಅಪಘಾತಗೊಂಡ ಫಲಾನುಭವಿಗಳಿಗೆ ಈ ಕೆಳಕಂಡ ಸೌಲಭ್ಯಗಳನ್ನು ನೀಡಲಾಗುತ್ತಿದೆ.<br>• ಅಪಘಾತದಿಂದ ಮರಣಹೊಂದಿದ ಪ್ರಕರಣಗಳಲ್ಲಿ ಮೃತರ ನಾಮ ನಿರ್ದೇಶಿತರಿಗೆ ರೂ.5 ಲಕ್ಷ ಪರಿಹಾರ.<br>• ಅಪಘಾತದಿಂದ ಶಾಶ್ವತ ದುರ್ಬಲತೆ ಹೊಂದಿದಾಗ, ಫಲಾನುಭವಿಗೆ ದುರ್ಬಲತೆಯ ಪ್ರಮಾಣಕ್ಕನುಗುಣವಾಗಿ ರೂ.2 ಲಕ್ಷದ ವರೆಗೆ ಪರಿಹಾರ.<br>• ಅಪಘಾತದಿಂದ ತಾತ್ಕಾಲಿಕ ದುರ್ಬಲತೆ ಹೊಂದಿದಾಗ ರೂ.1.00 ಲಕ್ಷಗಳ ವರೆಗೆ ಆಸ್ಪತ್ರೆ ವೆಚ್ಚ ಮರುಪಾವತಿ.<br>• ಅಪಘಾತದ ಕಾರಣ ನಿಧನರಾದ ಅಥವಾ ಸಂಪೂರ್ಣ ಶಾಶ್ವತ ದುರ್ಬಲತೆ ಹೊಂದಿದ ಫಲಾನುಭವಿಗಳ ಇಬ್ಬರು ಮಕ್ಕಳಿಗೆ ಪದವಿಪೂರ್ವ ವ್ಯಾಸಂಗದವರೆಗೆ ವಾರ್ಷಿಕ 10,000/- ರೂ.ಗಳ ಶೈಕ್ಷಣಿಕ ಧನಸಹಾಯ. |
| ಇ) | ಅವರಿಗೆ ಉಚಿತ ಆರೋಗ್ಯ ಕಾರ್ಡ್ ವಿತರಿಸುವುದು ಮತ್ತು ಅಸಂಘಟಿತ ಕಾರ್ಮಿಕರಿಗೆ ವಸತಿ ಯೋಜನೆ ಕಲ್ಪಿಸುವುದರಲ್ಲಿ ಸರ್ಕಾರವು ಯಾವ ಕ್ರಮವನ್ನು ತೆಗೆದುಕೊಂಡಿದೆ. | ಆಟೋ ಚಾಲಕರಿಗೆ ಉಚಿತ ಆರೋಗ್ಯ ಕಾರ್ಡ್ ವಿತರಿಸುವುದು ಮತ್ತು ಅಸಂಘಟಿತ ಕಾರ್ಮಿಕರಿಗೆ ವಸತಿ ಯೋಜನೆ ಕಲ್ಪಿಸುವ ಯಾವುದೇ ಯೋಜನೆಯನ್ನು ಮಂಡಳಿಯ ಮೂಲಕ ಜಾರಿಗೊಳಿಸುತ್ತಿಲ್ಲ. |
| ಈ) | ಅಸಂಘಟಿತ ಕಾರ್ಮಿಕರ ಮಕ್ಕಳಿಗೆ ವಿದ್ಯಾರ್ಥಿವೇತನ ನೀಡುವ ಚಿಂತನೆ ಸರ್ಕಾರದ ಮುಂದಿದೆಯೇ? | ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿಯು ಜಾರಿಗೊಳಿಸುತ್ತಿರುವ "ಕರ್ನಾಟಕ ರಾಜ್ಯ ಖಾಸಗಿ ವಾಣಿಜ್ಯ ಸಾರಿಗೆ ಕಾರ್ಮಿಕರ ಅಪಘಾತ ಪರಿಹಾರ ಯೋಜನೆ"ಯಡಿ ಅಪಘಾತದ ಕಾರಣ ನಿಧನರಾದ ಅಥವಾ ಸಂಪೂರ್ಣ ಶಾಶ್ವತ ದುರ್ಬಲತೆ ಹೊಂದಿದ ಫಲಾನುಭವಿಗಳ ಇಬ್ಬರು ಮಕ್ಕಳಿಗೆ ಪದವಿಪೂರ್ವ ವ್ಯಾಸಂಗದವರೆಗೆ ವಾರ್ಷಿಕ ತಲಾ 10,000/- ರೂ.ಗಳ ಶೈಕ್ಷಣಿಕ ಧನಸಹಾಯವನ್ನು 2018-19ನೇ ಸಾಲಿನಿಂದ ನೀಡಲಾಗುತ್ತಿದೆ. ಇದನ್ನೂ ಹೊರತುಪಡಿಸಿ ಇತರೆ ಯಾವುದೇ ವರ್ಗಗಳ ಅಸಂಘಟಿತ ಕಾರ್ಮಿಕರ ಮಕ್ಕಳಿಗೆ ವಿದ್ಯಾರ್ಥಿ ವೇತನವನ್ನು ಮಂಡಳಿಯಿಂದ ನೀಡಲಾಗುತ್ತಿಲ್ಲ. |

ಕಾಇ 144 ಎಲ್ಇಟಿ 2021

(ಅರಬೈಲ್ ಶಿವರಾಂ ಹೆಬ್ಬಾರ್)
ಕಾರ್ಮಿಕ ಸಚಿವರು

# ಕರ್ನಾಟಕ ವಿಧಾನ ಸಭೆ

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 3657
2. ಮಾನ್ಯ ಸದಸ್ಯರ ಹೆಸರು : ಶ್ರೀಮತಿ ಸೌಮ್ಯ ರೆಡ್ಡಿ (ಜಯನಗರ)
3. ಉತ್ತರಿಸಬೇಕಾದ ದಿನಾಂಕ : 25/3/2021
4. ಉತ್ತರಿಸುವವರು : ಮಾನ್ಯ ಕಾರ್ಮಿಕ ಸಚಿವರು

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಅಸಂಘಟಿತ ಕಾರ್ಮಿಕರ ಭವಿಷ್ಯನಿಧಿ (ಪಿ.ಎಫ್) ಯೋಜನೆಗೆ ಹಣ ಮೀಸಲಿಡುವುದು ಮತ್ತು ಅವರಿಗೆ ಅಸಂಘಟಿತ ಕಾರ್ಮಿಕರ ಕಲ್ಯಾಣ ಮಂಡಳಿಯ ಗುರುತಿನ ಚೀಟಿ ಒದಗಿಸುವುದರ ಬಗ್ಗೆ ಸರ್ಕಾರ ಕೈಗೊಂಡಿರುವ ಕ್ರಮವೇನು: | ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿಯ ಮೂಲಕ 11 ವರ್ಗಗಳ ಅಸಂಘಟಿತ ಕಾರ್ಮಿಕರಾದ ಹಮಾಲರು, ಚಿಂದಿ ಆಯುವವರು, ಮನೆಗೆಲಸದವರು, ಟೈಲರ್‌ಗಳು, ಮೆಕ್ಯಾನಿಕ್, ಅಗಸರು, ಕ್ಷೌರಿಕರು, ಅಕ್ಕಸಾಲಿಗರು, ಕಮ್ಮಾರರು, ಕುಂಬಾರರು ಹಾಗೂ ಭಟ್ಟಿಕಾರ್ಮಿಕರಿಗೆ ಪಿ.ಎಫ್ ಯೋಜನೆಯನ್ನು ಜಾರಿಗೊಳಿಸುವ ಕುರಿತು ಸರ್ಕಾರದ ಆದೇಶ ಸಂಖ್ಯೆ:ಕಾಇ 150 ಎಲ್‌ಇಟಿ 2018, ದಿನಾಂಕ:27-12-2018 ರ ಕ್ರಿಯಾ ಯೋಜನೆರನ್ವಯ 2018-19ನೇ ಸಾಲಿನಲ್ಲಿ ರೂ.14.00 ಕೋಟಿಗಳ ಅನುದಾನವನ್ನು ಮೀಸಲಿಡಲಾಗಿದ್ದು, ಸದರಿ ಯೋಜನೆಯನ್ನು ಸಮರ್ಪಕವಾಗಿ ಜಾರಿಗೊಳಿಸಲು ಅಗತ್ಯ ಕ್ರಮಗಳನ್ನು ಸಹ ಕೈಗೊಳ್ಳಲಾಗಿತ್ತು. ಆದರೆ, 2019 ರಲ್ಲಿ ಕೇಂದ್ರ ಸರ್ಕಾರವು ಎಲ್ಲಾ ಅಸಂಘಟಿತ ವರ್ಗಗಳ ಕಾರ್ಮಿಕರಿಗಾಗಿ **"ಪ್ರಧಾನ ಮಂತ್ರಿ ಶ್ರಮ್ ಯೋಗಿ ಮಾನ್-ಧನ್ ಯೋಜನೆ"** ಎನ್ನುವ ವಂತಿಕೆ ಆಧಾರಿತ ಪಿಂಚಣಿ ಯೋಜನೆಯನ್ನು ಜಾರಿಗೊಳಿಸಿದ ಹಿನ್ನೆಲೆಯಲ್ಲಿ, ಒಂದೇ ಮಾದರಿಯ 2 ಸೌಲಭ್ಯಗಳು ಒದಗಿಸಿದಂತಾಗುತ್ತದೆ ಎಂಬ ಕಾರಣದಿಂದ ರಾಜ್ಯ ಸರ್ಕಾರದ ಪಿ.ಎಫ್ (ಭವಿಷ್ಯನಿಧಿ) ಯೋಜನೆಯನ್ನು ಕೈಬಿಡಲಾಗಿರುತ್ತದೆ.<br><br>ಮೇಲೆ ತಿಳಿಸಲಾದ 11 ವರ್ಗಗಳ ಅಸಂಘಟಿತ ಕಾರ್ಮಿಕರನ್ನು ಮಂಡಳಿಯಲ್ಲಿ **"ಅಂಬೇಡ್ಕರ್ ಕಾರ್ಮಿಕ ಸಹಾಯ ಹಸ್ತ ಯೋಜನೆ"**ಯಡಿ ನೋಂದಾಯಿಸಿ, ಸ್ಮಾರ್ಟ್ ಕಾರ್ಡ್ ಅನ್ನು ವಿತರಿಸಲಾಗುತ್ತಿದೆ. ಈವರೆಗೂ 1,63,519 ಕಾರ್ಮಿಕರನ್ನು ನೋಂದಾಯಿಸಲಾಗಿರುತ್ತದೆ. ಪ್ರಸ್ತುತ ನೋಂದಣಿ ಪ್ರಕ್ರಿಯೆಯನ್ನು ಆನ್‌ಲೈನ್ ಮೂಲಕ ಕೈಗೊಳ್ಳಲಾಗುತ್ತಿದೆ. |
| ಆ) | ಅಸಂಘಟಿತ ಕಾರ್ಮಿಕರ ಹಾಗೂ ಆಟೋ ಚಾಲಕರಿಗೆ ಅಪಘಾತ ಮತ್ತು ಮರಣ ಹೊಂದಿದಾಗ ಸದರಿ ಕುಂಟುಂಬದವರಿಗೆ ಪರಿಹಾರ ಧನ ಒದಗಿಸುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ: | ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿಯ ಮೂಲಕ ಆಟೋ ಚಾಲಕರು ಸೇರಿದಂತೆ ಕರ್ನಾಟಕ ರಾಜ್ಯದ ಎಲ್ಲಾ ಖಾಸಗಿ ವಾಣಿಜ್ಯ ಸಾರಿಗೆ ಕಾರ್ಮಿಕರಿಗೆ ಅಪಘಾತ ಪರಿಹಾರ ಒದಗಿಸುವ **"ಕರ್ನಾಟಕ ರಾಜ್ಯ ಖಾಸಗಿ ವಾಣಿಜ್ಯ ಸಾರಿಗೆ ಕಾರ್ಮಿಕರ ಅಪಘಾತ ಪರಿಹಾರ ಯೋಜನೆ"**ಯನ್ನು 2011-12ನೇ ಸಾಲಿನಲ್ಲೇ |

| | | |
|---|---|---|
| | | ಜಾರಿಗೊಳಿಸಲಾಗಿದೆ. ಈ ಯೋಜನೆಯಡಿ ಅಪಘಾತಗೊಂಡ ಫಲಾನುಭವಿಗಳಿಗೆ ಈ ಕೆಳಕಂಡ ಸೌಲಭ್ಯಗಳನ್ನು ನೀಡಲಾಗುತ್ತಿದೆ.<br>• ಅಪಘಾತದಿಂದ ಮರಣಹೊಂದಿದ ಪ್ರಕರಣಗಳಲ್ಲಿ ಮೃತರ ನಾಮ ನಿರ್ದೇಶಿತರಿಗೆ ರೂ.5 ಲಕ್ಷ ಪರಿಹಾರ.<br>• ಅಪಘಾತದಿಂದ ಶಾಶ್ವತ ದುರ್ಬಲತೆ ಹೊಂದಿದಾಗ, ಫಲಾನುಭವಿಗೆ ದುರ್ಬಲತೆಯ ಪ್ರಮಾಣಕ್ಕನುಗುಣವಾಗಿ ರೂ.2 ಲಕ್ಷದ ವರೆಗೆ ಪರಿಹಾರ.<br>• ಅಪಘಾತದಿಂದ ತಾತ್ಕಾಲಿಕ ದುರ್ಬಲತೆ ಹೊಂದಿದಾಗ ರೂ.1.00 ಲಕ್ಷಗಳ ವರೆಗೆ ಆಸ್ಪತ್ರೆ ವೆಚ್ಚ ಮರುಪಾವತಿ.<br>• ಅಪಘಾತದ ಕಾರಣ ನಿಧನರಾದ ಅಥವಾ ಸಂಪೂರ್ಣ ಶಾಶ್ವತ ದುರ್ಬಲತೆ ಹೊಂದಿದ ಫಲಾನುಭವಿಗಳ ಇಬ್ಬರು ಮಕ್ಕಳಿಗೆ ಪದವಿಪೂರ್ವ ವ್ಯಾಸಂಗದವರೆಗೆ ವಾರ್ಷಿಕ 10,000/- ರೂ.ಗಳ ಶೈಕ್ಷಣಿಕ ಧನಸಹಾಯ. |
| ಇ) | ಅವರಿಗೆ ಉಚಿತ ಆರೋಗ್ಯ ಕಾರ್ಡ್ ವಿತರಿಸುವುದು ಮತ್ತು ಅಸಂಘಟಿತ ಕಾರ್ಮಿಕರಿಗೆ ವಸತಿ ಯೋಜನೆ ಕಲ್ಪಿಸುವುದರಲ್ಲಿ ಸರ್ಕಾರವು ಯಾವ ಕ್ರಮವನ್ನು ತೆಗೆದುಕೊಂಡಿದೆ. | ಆಟೋ ಚಾಲಕರಿಗೆ ಉಚಿತ ಆರೋಗ್ಯ ಕಾರ್ಡ್ ವಿತರಿಸುವುದು ಮತ್ತು ಅಸಂಘಟಿತ ಕಾರ್ಮಿಕರಿಗೆ ವಸತಿ ಯೋಜನೆ ಕಲ್ಪಿಸುವ ಯಾವುದೇ ಯೋಜನೆಯನ್ನು ಮಂಡಳಿಯ ಮೂಲಕ ಜಾರಿಗೊಳಿಸುತ್ತಿಲ್ಲ. |
| ಈ) | ಅಸಂಘಟಿತ ಕಾರ್ಮಿಕರ ಮಕ್ಕಳಿಗೆ ವಿದ್ಯಾರ್ಥಿವೇತನ ನೀಡುವ ಚಿಂತನೆ ಸರ್ಕಾರದ ಮುಂದಿದೆಯೇ? | ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿಯು ಜಾರಿಗೊಳಿಸುತ್ತಿರುವ "ಕರ್ನಾಟಕ ರಾಜ್ಯ ಖಾಸಗಿ ವಾಣಿಜ್ಯ ಸಾರಿಗೆ ಕಾರ್ಮಿಕರ ಅಪಘಾತ ಪರಿಹಾರ ಯೋಜನೆ"ಯಡಿ ಅಪಘಾತದ ಕಾರಣ ನಿಧನರಾದ ಅಥವಾ ಸಂಪೂರ್ಣ ಶಾಶ್ವತ ದುರ್ಬಲತೆ ಹೊಂದಿದ ಫಲಾನುಭವಿಗಳ ಇಬ್ಬರು ಮಕ್ಕಳಿಗೆ ಪದವಿಪೂರ್ವ ವ್ಯಾಸಂಗದವರೆಗೆ ವಾರ್ಷಿಕ ತಲಾ 10,000/- ರೂ.ಗಳ ಶೈಕ್ಷಣಿಕ ಧನಸಹಾಯವನ್ನು 2018-19ನೇ ಸಾಲಿನಿಂದ ನೀಡಲಾಗುತ್ತಿದೆ. ಇದನ್ನೂ ಹೊರತುಪಡಿಸಿ ಇತರೆ ಯಾವುದೇ ವರ್ಗಗಳ ಅಸಂಘಟಿತ ಕಾರ್ಮಿಕರ ಮಕ್ಕಳಿಗೆ ವಿದ್ಯಾರ್ಥಿ ವೇತನವನ್ನು ಮಂಡಳಿಯಿಂದ ನೀಡಲಾಗುತ್ತಿಲ್ಲ. |

ಕಾಇ 144 ಎಲ್‌ಇಟಿ 2021

(ಅರಬೈಲ್ ಶಿವರಾಂ ಹೆಬ್ಬಾರ್)
ಕಾರ್ಮಿಕ ಸಚಿವರು

**ಕರ್ನಾಟಕ ಸರ್ಕಾರ**

ಸಂಖ್ಯೆ: ಕಾಇ 136 ಎಲ್‌ಇಟಿ 2021

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸಸೌಧ,
ಬೆಂಗಳೂರು, ದಿನಾಂಕ: 20 /04/2021

**ಇವರಿಂದ:**
ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ,
ಕಾರ್ಮಿಕ ಇಲಾಖೆ,
ವಿಕಾಸಸೌಧ, ಬೆಂಗಳೂರು.

**ಇವರಿಗೆ:**
ಕಾರ್ಯದರ್ಶಿ,
ಕರ್ನಾಟಕ ವಿಧಾನ ಸಭೆ
ವಿಧಾನಸೌಧ, ಬೆಂಗಳೂರು.

ಮಾನ್ಯರೆ,

ವಿಷಯ: ಮಾನ್ಯ ವಿಧಾನ ಸಭೆಯ ಸದಸ್ಯರಾದ ಶ್ರೀ ಕೃಷ್ಣಾರೆಡ್ಡಿ ಎಂ. (ಚಿಂತಾಮಣಿ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 1809ಕ್ಕೆ ಉತ್ತರ ಸಲ್ಲಿಸುವ ಕುರಿತು.

*******

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನ ಸಭೆಯ ಸದಸ್ಯರಾದ ಶ್ರೀ ಕೃಷ್ಣಾರೆಡ್ಡಿ ಎಂ. (ಚಿಂತಾಮಣಿ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 1809ಕ್ಕೆ ಉತ್ತರದ 25 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಮುಂದಿನ ಸೂಕ್ತ ಕ್ರಮಕ್ಕಾಗಿ ತಮಗೆ ಕಳುಹಿಸಿಕೊಡಲು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮ ವಿಶ್ವಾಸಿ,

(ಪ್ರದೀಪ್ ಕುಮಾರ್ ಬಿ.ಎಸ್)
ಸರ್ಕಾರದ ಅಧೀನ ಕಾರ್ಯದರ್ಶಿ,
ಕಾರ್ಮಿಕ ಇಲಾಖೆ.

# ಕರ್ನಾಟಕ ವಿಧಾನ ಸಭೆ

| | | |
|---|---|---|
| 1. | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 1809 |
| 2. | ಮಾನ್ಯ ಸದಸ್ಯರ ಹೆಸರು | ಶ್ರೀ ಕೃಷ್ಣಾರೆಡ್ಡಿ ಎಂ. (ಚಿಂತಾಮಣಿ) |
| 3. | ಉತ್ತರಿಸಬೇಕಾದ ದಿನಾಂಕ | 25/03/2021 |
| 4. | ಉತ್ತರಿಸುವವರು | ಮಾನ್ಯ ಕಾರ್ಮಿಕ ಸಚಿವರು |

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಚಿಕ್ಕಬಳ್ಳಾಪುರ ಜಿಲ್ಲೆ, ಚಿಂತಾಮಣಿ ತಾಲ್ಲೂಕಿನ ಕೈವಾರ ಹೋಬಳಿ, ದೊಡ್ಡಹಳ್ಳಿ ಗ್ರಾಮದ ಸರ್ವೆ ನಂ. 13ರಲ್ಲಿ ಕಾರ್ಮಿಕ ಭವನ ನಿರ್ಮಾಣ ಮಾಡಲು 1.00 ಎಕರೆ ಜಮೀನು ಮಂಜೂರು ಮಾಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಹೌದು. |
| ಆ) | ಬಂದಿದ್ದಲ್ಲಿ, ಸದರಿ ಜಮೀನನ್ನು ಸರ್ವೆ ಮಾಡಿಸಿ ಇಲಾಖೆಯ ವಶಕ್ಕೆ ಪಡೆದು, ಕಾರ್ಮಿಕ ಭವನ ನಿರ್ಮಾಣ ಮಾಡಲು ಅನುದಾನ ಬಿಡುಗಡೆಗೆ ಕ್ರಮ ಕೈಗೊಳ್ಳಲಾಗಿದೆಯೇ? (ವಿವರ ನೀಡುವುದು) | ಮಂಜೂರಾದ ಜಮೀನನ್ನು ಸರ್ವೆ ಮಾಡಿಸಿ ಚೆಕ್‌ಬಂದಿ ಗುರುತಿಸಿ ಎಲ್ಲಾ ಕಂದಾಯ ದಾಖಲೆಗಳಲ್ಲಿ ಸೂಕ್ತ ನಮೂದು ಮಾಡಲು ಮತ್ತು ಜಮೀನನ್ನು ಸಂಬಂಧಿಸಿದ ಚಿಂತಾಮಣಿ ಕಾರ್ಮಿಕ ನಿರೀಕ್ಷಕರಿಗೆ ಹಸ್ತಾಂತರಿಸಲು ಮಂಜೂರಾದ ಜಮೀನಿನ ಚೆಕ್‌ಬಂದಿಯಂತೆ ಜಮೀನಿನ ನಾಲ್ಕು ಮೂಲೆಗಳಲ್ಲಿ ಬಾವುಟಗಳನ್ನು ನಿಲ್ಲಿಸಿ, ಜಮೀನಿನ ನಾಲ್ಕು ದಿಕ್ಕುಗಳಿಂದಲೂ ರಸ್ತೆ ಸಂಪರ್ಕ ಬಾವುಟ ಕಾಣುವಂತೆ ಫೋಟೋ ತೆಗಿಸಿ ಆರ್.ಟಿ.ಸಿ / ಎಂ.ಆರ್ ಪ್ರತಿಗಳೊಂದಿಗೆ ದಾಖಲೆಗಳನ್ನು ಸಲ್ಲಿಸುವಂತೆ ತಹಶೀಲ್ದಾರ್, ಚಿಂತಾಮಣಿ ರವರಿಗೆ ಜಿಲ್ಲಾಧಿಕಾರಿಗಳು, ಚಿಕ್ಕಬಳ್ಳಾಪುರ ಇವರು ಪತ್ರ ಬರೆದಿರುತ್ತಾರೆ. ಜಿಲ್ಲಾಧಿಕಾರಿಗಳು, ಚಿಕ್ಕಬಳ್ಳಾಪುರ ಇವರ ನಿರ್ದೇಶನದಂತೆ ಕ್ರಮವಹಿಸಿ ಸದರಿ ದಾಖಲೆಗಳನ್ನು ತಹಶೀಲ್ದಾರ್, ಚಿಂತಾಮಣಿರವರು ಸಲ್ಲಿಸಿದ ನಂತರ ಕಾರ್ಮಿಕ ಭವನ ನಿರ್ಮಾಣ ಮಾಡಲು ನಿಯಮಾನುಸಾರವಾಗಿ ಕ್ರಮವಹಿಸಲಾಗುವುದು. |

ಕಾಇ 136 ಎಲ್‌ಇಟಿ 2021

(ಅರಬೈಲ್ ಶಿವರಾಂ ಹೆಬ್ಬಾರ್)
ಕಾರ್ಮಿಕ ಸಚಿವರು

ಕರ್ನಾಟಕ ಸರ್ಕಾರ

ಸಂಖ್ಯೆ: ಕಾಇ 143 ಎಲ್ಇಟಿ 2021

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸಸೌಧ,
ಬೆಂಗಳೂರು, ದಿನಾಂಕ: 20/04/2021

**ಇವರಿಂದ:**
ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ,
ಕಾರ್ಮಿಕ ಇಲಾಖೆ,
ವಿಕಾಸಸೌಧ, ಬೆಂಗಳೂರು.

**ಇವರಿಗೆ:**
ಕಾರ್ಯದರ್ಶಿ,
ಕರ್ನಾಟಕ ವಿಧಾನ ಸಭೆ
ವಿಧಾನಸೌಧ, ಬೆಂಗಳೂರು.

ಮಾನ್ಯರೆ,

ವಿಷಯ: ಮಾನ್ಯ ವಿಧಾನ ಸಭೆಯ ಸದಸ್ಯರಾದ ಶ್ರೀ ಆಚಾರ್ ಹಾಲಪ್ಪ ಬಸಪ್ಪ (ಯಲಬುರ್ಗ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 4004ಕ್ಕೆ ಉತ್ತರ ಸಲ್ಲಿಸುವ ಕುರಿತು.

*******

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನ ಸಭೆಯ ಸದಸ್ಯರಾದ ಶ್ರೀ ಆಚಾರ್ ಹಾಲಪ್ಪ ಬಸಪ್ಪ (ಯಲಬುರ್ಗ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 4004ಕ್ಕೆ ಉತ್ತರದ 20 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಮುಂದಿನ ಸೂಕ್ತ ಕ್ರಮಕ್ಕಾಗಿ ತಮಗೆ ಕಳುಹಿಸಿಕೊಡಲು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮ ವಿಶ್ವಾಸಿ,

(ಪ್ರದೀಪ್ ಕುಮಾರ್ ಬಿ.ಎಸ್)
ಸರ್ಕಾರದ ಅಧೀನ ಕಾರ್ಯದರ್ಶಿ,
ಕಾರ್ಮಿಕ ಇಲಾಖೆ.

# ಕರ್ನಾಟಕ ವಿಧಾನ ಸಭೆ

| | | |
|---|---|---|
| 1. | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | **4004** |
| 2. | ಮಾನ್ಯ ಸದಸ್ಯರ ಹೆಸರು | ಶ್ರೀ ಆಚಾರ್ ಹಾಲಪ್ಪ ಬಸಪ್ಪ (ಯಲಬುರ್ಗ) |
| 3. | ಉತ್ತರಿಸಬೇಕಾದ ದಿನಾಂಕ | **25/03/2021** |
| 4. | ಉತ್ತರಿಸುವವರು | ಮಾನ್ಯ ಕಾರ್ಮಿಕ ಸಚಿವರು |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಕೊಪ್ಪಳ ಜಿಲ್ಲೆಯಲ್ಲಿ ನೋಂದಾಯಿಸಿಕೊಂಡಿರುವ ಒಟ್ಟು ಕಟ್ಟಡ ಕಾರ್ಮಿಕರ ಸಂಖ್ಯೆ ಎಷ್ಟು; (ತಾಲ್ಲೂಕುವಾರು ವಿವರ ನೀಡುವುದು) | ಕೊಪ್ಪಳ ಜಿಲ್ಲೆಯಲ್ಲಿ ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿಗೆ ನೋಂದಾಯಿಸಿಕೊಂಡಿರುವ ಒಟ್ಟು ಕಟ್ಟಡ ಕಾರ್ಮಿಕರ ಸಂಖ್ಯೆ 60,614 ಆಗಿರುತ್ತದೆ. ಅದರ ತಾಲ್ಲೂಕುವಾರು ವಿವರ ಈ ಕೆಳಗಿನಂತಿವೆ. |

| ಕ್ರಸಂ | ತಾಲ್ಲೂಕು | ನೋಂದಾಯಿತ ಕಟ್ಟಡ ಕಾರ್ಮಿಕರ ಸಂಖ್ಯೆ |
|---|---|---|
| 1 | ಕೊಪ್ಪಳ | 17,733 |
| 2 | ಕುಷ್ಟಗಿ | 27,985 |
| 3 | ಗಂಗಾವತಿ | 14,896 |
| | ಒಟ್ಟು | 60,614 |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಆ) | ಕಾರ್ಮಿಕರುಗಳಿಂದ ವಿವಿಧ ಸೌಲಭ್ಯಗಳನ್ನು ಕೋರಿ ಮಂಡಳಿಯಲ್ಲಿ ಸ್ವೀಕರಿಸಲಾದ ಅರ್ಜಿಗಳ ಸಂಖ್ಯೆ ಎಷ್ಟು; (ವಿವರಗಳನ್ನು ನೀಡುವುದು) | ಫಲಾನುಭವಿಗಳಿಂದ ವಿವಿಧ ಸೌಲಭ್ಯ ಕೋರಿ ಒಟ್ಟು 3,847 ಅರ್ಜಿಗಳು ಸ್ವೀಕೃತವಾಗಿದ್ದು ವಿವರ ಈ ಕೆಳಕಂಡಂತಿವೆ. |
| ಇ) | ಮದುವೆ, ಶೈಕ್ಷಣಿಕ ಹಾಗೂ ವೈದ್ಯಕೀಯ ವೆಚ್ಚದ ಸಹಾಯಕ್ಕಾಗಿ ಕಾರ್ಮಿಕರಿಗೆ ಸರ್ಕಾರ ಒದಗಿಸಿದ ಸೌಲಭ್ಯಗಳ ಮಾಹಿತಿಯನ್ನು ಸೌಲಭ್ಯಗಳವಾರು ನೀಡುವುದು. | |

| ಕ್ರ ಸಂ | ಸೌಲಭ್ಯಗಳ ವಿವರ | ಸ್ವೀಕೃತ ವಾದ ಅರ್ಜಿಗಳ ಸಂಖ್ಯೆ | ಮಂಜೂರಾತಿ ಮಾಡಲಾದ ಒಟ್ಟು ಅರ್ಜಿಗಳ ಸಂಖ್ಯೆ | ಮಂಜೂರಾತಿಯಾಧ ಮೊತ್ತ | ತಿರಸ್ಕೃತ ವಾದ ಅರ್ಜಿಗಳ ಸಂಖ್ಯೆ |
|---|---|---|---|---|---|
| 1 | ಶೈಕ್ಷಣಿಕ ಧನ ಸಹಾಯ | 2,903 | 2,277 | 99,37,000=00 | 626 |
| 2 | ಮದುವೆ ಧನ ಸಹಾಯ | 834 | 720 | 3,60,00,000=00 | 114 |
| 3 | ವೈದ್ಯಕೀಯ ಧನ ಸಹಾಯ | 17 | 13 | 1,52,000=00 | 4 |
| 4 | ಪ್ರಮುಖ ವೈದ್ಯಕೀಯ ಧನ ಸಹಾಯ | 19 | 17 | 11,39,000=00 | 2 |
| 5 | ಹೆರಿಗೆ ಧನ ಸಹಾಯ | 74 | 61 | 13,45,000=00 | 13 |
| | ಒಟ್ಟು | 3,847 | 3088 | 4,85,73,000=00 | 759 |

| ಈ) | ಸ್ವೀಕೃತವಾಗಿರುವ ಅರ್ಜಿಗಳಲ್ಲಿ ಕಳೆದ ಮೂರು ವರ್ಷಗಳಿಂದ ಇದುವರೆಗೂ ಸೌಲಭ್ಯ ನೀಡದಿರುವ ಪ್ರಕರಣಗಳೇನಾದರೂ ಇದೆಯೇ; ಇದ್ದಲ್ಲಿ ವಿಳಂಬಕ್ಕೆ ಕಾರಣಗಳನ್ನು ನೀಡುವುದು? | ಕೊಪ್ಪಳ ಜಿಲ್ಲೆಯಲ್ಲಿ ಕಳೆದ 3 ವರ್ಷಗಳಿಂದ ವಿವಿಧ ಸೌಲಭ್ಯಗಳಿಗಾಗಿ ಸ್ವೀಕೃತವಾದ ಅರ್ಜಿಗಳಲ್ಲಿ ಸೌಲಭ್ಯ ನೀಡದಿರುವ ಪ್ರಕರಣಗಳು ಒಟ್ಟು 63 ಬಾಕಿ ಇದ್ದು, ಸದರಿ ಅರ್ಜಿಗಳ ವಿವರ ಮತ್ತು ವಿಳಂಬಕ್ಕೆ ಕಾರಣ ಈ ಕೆಳಗಿನಂತಿವೆ. |
|---|---|---|

| ಕ್ರ.ಸಂ | ಫಲಾನುಭವಿಯ ಹೆಸರು | ಸೌಲಭ್ಯದ ಹೆಸರು | ವಿಳಂಬಕ್ಕೆ ಕಾರಣ |
|---|---|---|---|
| 1 | ಹೇಮಣ್ಣ ತಂದೆ ಜಿಂಕಪ್ಪ ಹಂಚಿನಾಳ ಕುಷ್ಟಗಿ. | ಮದುವೆ ಸಹಾಯ ಧನ | ಸದರಿ ಅರ್ಜಿಗಳು ಮಂಜೂರಾತಿಯಾಗಿದ್ದು, ಫಲಾನುಭವಿಗಳ ಬ್ಯಾಂಕ್ ಅಕೌಂಟ್‌ನ ನ್ಯೂನ್ಯತೆಯಿಂದಾಗಿ ಅವರ ಖಾತೆಗೆ ಸಹಾಯಧನ ವರ್ಗಾವಣೆಯಾಗದೆ ಮರಳಿ ಮಂಡಳಿಯ ಖಾತೆಗೆ ಜಮೆಯಾಗಿರುತ್ತದೆ. ಫಲಾನುಭವಿಗಳಿಂದ ಸರಿಯಾದ ವಿವರಣೆಯುಳ್ಳ ಬ್ಯಾಂಕ್ ದಾಖಲಾತಿಗಳನ್ನು ಪಡೆದು, ತಕ್ಷಣ ಬ್ಯಾಂಕ್‌ಗೆ ಸಹಾಯಧನ ವರ್ಗಾಯಿಸಲು ಕ್ರಮವಹಿಸಲಾಗುವುದು. |
| 2 | ರಾಜಪ್ಪ ತಂದೆ ಯಮನಪ್ಪ ಕುಷ್ಟಗಿ | | |
| 3 | ಭೀಮಪ್ಪ ತಂದೆ ದ್ಯಾಮಪ್ಪ ದಂಡಿನ ಸಾ: ನಿಲೋಗಲ್ಲ್, ತಾ: ಕುಷ್ಟಗಿ. | | |
| 4 | ಅಬ್ದುಲ್ ಖಾದರ ತಂದೆ ಮೈಬೂಸಾಬ ಬಾನಾದಾರ | | |
| 5 | ಶಿವಪ್ಪ ತಂದೆ ಕೀರ್ತೆಪ್ಪ ಗುಜ್ಜಲ | | |
| 6 | ನಾಗರಾಜ | | |
| 7 | ಶರಣಮ್ಮ | | |
| 8 | ಯಂಕೋಬ | | |
| 9 | ರೇಣವ್ವ | | |
| 10 | ಶರಣಪ್ಪ | | |
| 11 | ರಾಮಚಂದ್ರಪ್ಪ | | |
| 12 | ಲಕ್ಷಮವ್ವ ಯಂಕಪ್ಪ | | |
| 13 | ಶರಣಪ್ಪ ಫಕಿರಪ್ಪ | | |
| 14 | ಭಾಗ್ಯಶ್ರೀ ಯಮನಪ್ಪ | | |
| 15 | ಯಲ್ಲಪ್ಪ | ಮೆಡಿಕಲ್ ಸಹಾಯ ಧನ | |
| 16 | ಶಾಂತವ್ವ | ಶೈಕ್ಷಣಿಕ ಸಹಾಯ ಧನ | |
| 17 | ಯಮನೂರಪ್ಪ | | |
| 18 | ಶಾಹೀದಾ | | |
| 19 | ರಂಜಾನಬಿ | ಶೈಕ್ಷಣಿಕ ಸಹಾಯ ಧನ | |
| 20 | ಹನಮಪ್ಪ | | |
| 21 | ವಿಧ್ಯಾ ನಾಲ್ವಾಡ | | |
| 22 | ಲಕ್ಷ್ಮವ್ವ | | |
| 23 | ಫಕೀರೇಶ | | |
| 24 | ಬಸವ | | |
| 25 | ಯಲ್ಲಪ್ಪ | | |
| 26 | ಫಕೀರಪ್ಪ | | |
| 27 | ಶಂಕ್ರಪ್ಪ | | |
| 28 | ಶಿವಪ್ಪ | | |
| 29 | ಟಿ.ಈರಮ್ಮ | | |

|  |  |  |  |  |  |
|---|---|---|---|---|---|
|  |  | 30 | ಖಾನಿಂಬಿ |  |  |
|  |  | 31 | ಯಶೋದಮ್ಮ |  |  |
|  |  | 32 | ಯಲ್ಲಪ್ಪ |  |  |
|  |  | 33 | ಈರಮ್ಮ |  |  |
|  |  | 34 | ವೀರೇಶ |  |  |
|  |  | 35 | ಬಸವ್ವ |  |  |
|  |  | 36 | ಶರಣಬಸಪ್ಪ |  |  |
|  |  | 37 | ಖಾದರಸಾಬ |  | ಸದರಿ ಅರ್ಜಿಗಳು ಮಂಜೂರಾತಿಯಾಗಿದ್ದು, ಫಲಾನುಭವಿಗಳ ಬ್ಯಾಂಕ್ ಅಕೌಂಟ್‌ನ ನ್ಯೂನ್ಯತೆಯಿಂದಾಗಿ ಅವರ ಖಾತೆಗೆ ಸಹಾಯಧನ ವರ್ಗಾವಣೆಯಾಗದೆ ಮರಳಿ ಮಂಡಳಿಯ ಖಾತೆಗೆ ಜಮೆಯಾಗಿರುತ್ತದೆ. ಫಲಾನುಭವಿಗಳಿಂದ ಸರಿಯಾದ ವಿವರಣೆಯುಳ್ಳ ಬ್ಯಾಂಕ್ ದಾಖಲಾತಿಗಳನ್ನು ಪಡೆದು, ತಕ್ಷಣ ಬ್ಯಾಂಕ್‌ಗೆ ಸಹಾಯಧನ ವರ್ಗಾಯಿಸಲು ಕೂಡಲೇ ಕ್ರಮವಹಿಸಲಾಗುವುದು. |
|  |  | 38 | ಗಾಳೆಪ್ಪ ಮರಿಯಪ್ಪ |  |  |
|  |  | 39 | ಸುನಿತಾ |  |  |
|  |  | 40 | ಹುಸೇನಸಾಬ |  |  |
|  |  | 41 | ಗುರನಾಥ |  |  |
|  |  | 42 | ರತ್ನಮ್ಮ |  |  |
|  |  | 43 | ಅಕ್ಬರ್‌ಸಾಬ |  |  |
|  |  | 44 | ಲಕ್ಕಪ್ಪ |  |  |
|  |  | 45 | ಸಿದ್ದಮ್ಮ |  |  |
|  |  | 46 | ದಾದಾಪೀರ |  |  |
|  |  | 47 | ಬಸವರಾಜ |  |  |
|  |  | 48 | ಬಾರಬೊ ಗಂಗವ್ವ |  |  |
|  |  | 49 | ಶಮೀದಸಾಬ |  |  |
|  |  | 50 | ದ್ಯಾಮವ್ವ |  |  |
|  |  | 51 | ಲಲಿತಮ್ಮ |  |  |
|  |  | 52 | ಶ್ಯಾಮಿಧಸಾಬ |  |  |
|  |  | 53 | ಮಹೆಬೂಬ ಪಾಷಾ |  |  |
|  |  | 54 | ಶಶಿಕಲಾ |  |  |
|  |  | 55 | ಅಹ್ಮದ್ ಪಾಷಾ |  |  |
|  |  | 56 | ಮಹ್ಮದ್ ಹುಸೇನ್ ಬಾಷಾ |  |  |
|  |  | 57 | ಯಲ್ಲಪ್ಪ |  |  |
|  |  | 58 | ಯಮನೂರಪ್ಪ |  |  |
|  |  | 59 | ಶಿವಪ್ಪ |  |  |
|  |  | 60 | ಮಂಜುಳಾ |  |  |
|  |  | 61 | ಯಶೋಧಮ್ಮ |  |  |
|  |  | 62 | ಬಸವ್ವ |  |  |
|  |  | 63 | ನಾನಮ್ಮ |  |  |

**ಕಾಇ 143 ಎಲ್‌ಇಟಿ 2021**

(ಅರಬೈಲ್ ಶಿವರಾಂ ಹೆಬ್ಬಾರ್)

ಕಾರ್ಮಿಕ ಸಚಿವರು

**ಕರ್ನಾಟಕ ಸರ್ಕಾರ**

ಸಂಖ್ಯೆ: ಕಾಇ 141 ಎಲ್ಇಟಿ 2021

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸಸೌಧ,
ಬೆಂಗಳೂರು, ದಿನಾಂಕ: 20 /04/2021

**ಇವರಿಂದ:**
ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ,
ಕಾರ್ಮಿಕ ಇಲಾಖೆ,
ವಿಕಾಸಸೌಧ, ಬೆಂಗಳೂರು.

**ಇವರಿಗೆ:**
ಕಾರ್ಯದರ್ಶಿ,
ಕರ್ನಾಟಕ ವಿಧಾನ ಸಭೆ
ವಿಧಾನಸೌಧ, ಬೆಂಗಳೂರು.

ಮಾನ್ಯರೆ,

ವಿಷಯ: ಮಾನ್ಯ ವಿಧಾನ ಸಭೆಯ ಸದಸ್ಯರಾದ ಶ್ರೀ ಮುನಿಯಪ್ಪ ವಿ. (ಶಿಡ್ಲಘಟ್ಟ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 3891ಕ್ಕೆ ಉತ್ತರ ಸಲ್ಲಿಸುವ ಕುರಿತು.

*******

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನ ಸಭೆಯ ಸದಸ್ಯರಾದ ಶ್ರೀ ಮುನಿಯಪ್ಪ ವಿ. (ಶಿಡ್ಲಘಟ್ಟ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 3891ಕ್ಕೆ ಉತ್ತರದ 20 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಮುಂದಿನ ಸೂಕ್ತ ಕ್ರಮಕ್ಕಾಗಿ ತಮಗೆ ಕಳುಹಿಸಿಕೊಡಲು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮ ವಿಶ್ವಾಸಿ,

(ಪ್ರದೀಪ್ ಕುಮಾರ್ ಬಿ.ಎಸ್)
ಸರ್ಕಾರದ ಅಧೀನ ಕಾರ್ಯದರ್ಶಿ,
ಕಾರ್ಮಿಕ ಇಲಾಖೆ.

## ಕರ್ನಾಟಕ ವಿಧಾನ ಸಭೆ

| | | |
|---|---|---|
| 1. | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 3891 |
| 2. | ಮಾನ್ಯ ಸದಸ್ಯರ ಹೆಸರು | ಶ್ರೀ ಮುನಿಯಪ್ಪ ವಿ. (ಶಿಡ್ಲಘಟ್ಟ) |
| 3. | ಉತ್ತರಿಸಬೇಕಾದ ದಿನಾಂಕ | 25/03/2021 |
| 4. | ಉತ್ತರಿಸುವವರು | ಮಾನ್ಯ ಕಾರ್ಮಿಕ ಸಚಿವರು |

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಕಾರ್ಮಿಕರಿಗಾಗಿ ಇರುವ ವಿವಿಧ ಯೋಜನೆಗಳಾವುವು; (ವಿವರ ನೀಡುವುದು) | ಕಾರ್ಮಿಕ ಇಲಾಖೆಯಲ್ಲಿ ಸಂಘಟಿತ ಮತ್ತು ಅಸಂಘಟಿತ ಕಾರ್ಮಿಕರಿಗೆ ಇಲಾಖೆಯ ಅಧೀನದಲ್ಲಿ ಕಾರ್ಯನಿರ್ವಹಿಸುತ್ತಿರುವ ಮಂಡಳಿಗಳ ಮೂಲಕ ಹಲವು ಯೋಜನೆಗಳನ್ನು ಅನುಷ್ಠಾನಗೊಳಿಸಲಾಗುತ್ತಿದೆ.<br>1. **<u>ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿ:</u>**<br>ಈ ಮಂಡಳಿವತಿಯಿಂದ ನೋಂದಾಯಿತ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರಿಗೆ ಮತ್ತು ಅವರ ಅವಲಂಬಿತರಿಗಾಗಿ 19 ರೀತಿಯ ವಿವಿಧ ಕಲ್ಯಾಣ ಮತ್ತು ಸಾಮಾಜಿಕ ಭದ್ರತಾ ಸೌಲಭ್ಯಗಳನ್ನು ರೂಪಿಸಿ ಮಂಡಳಿಯಿಂದ ಅನುಷ್ಠಾನಗೊಳಿಸಲಾಗುತ್ತಿದೆ. ವಿವರವನ್ನು **<u>ಅನುಬಂಧ-1</u>** ರಲ್ಲಿ ಲಗತ್ತಿಸಿದೆ<br>**<u>2. ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿ:</u>**<br>ಈ ಮಂಡಳಿಯಿಂದ ಅಸಂಘಟಿತ ಕಾರ್ಮಿಕರಿಗೆ ಸಾಮಾಜಿಕ ಭದ್ರತೆ ಒದಗಿಸಲು, ಸರ್ಕಾರದಿಂದ ಈ ಕೆಳಕಂಡ ಯೋಜನೆಗಳನ್ನು ಅನುಷ್ಠಾನಗೊಳಿಸುತ್ತಿದೆ.<br>(1) **ಕರ್ನಾಟಕ ರಾಜ್ಯ ಖಾಸಗಿ ವಾಣಿಜ್ಯ ಸಾರಿಗೆ ಕಾರ್ಮಿಕರ ಅಪಘಾತ ಪರಿಹಾರ ಯೋಜನೆ:-** ಖಾಸಗಿ ವಾಣಿಜ್ಯ ಸಾರಿಗೆ ವಾಹನ ಕಾರ್ಮಿಕರಿಗೆ ಸಂಬಂಧಪಟ್ಟಂತೆ ಜಾರಿಗೊಳಿಸುತ್ತಿರುವ ಈ ಯೋಜನೆಯಡಿ ಕೆಳಕಂಡ ಸೌಲಭ್ಯಗಳನ್ನು ನೀಡಲಾಗುತ್ತಿದೆ.<br>(ಅ) **ಅಪಘಾತ ಪರಿಹಾರ:**<br>➢ ಅಪಘಾತದಿಂದ ಚಾಲಕರು, ನಿರ್ವಾಹಕರು ಹಾಗೂ ಕ್ಲೀನರ್‌ಗಳು ಮರಣ ಹೊಂದಿದಲ್ಲಿ, ಅವರ ನಾಮನಿರ್ದೇಶಿತರಿಗೆ ರೂ.5 ಲಕ್ಷ ಪರಿಹಾರ.<br>➢ ಅಪಘಾತದಿಂದ ಶಾಶ್ವತ ದುರ್ಬಲತೆ ಹೊಂದಿದಾಗ, ಫಲಾನುಭವಿಗೆ ದುರ್ಬಲತೆಯ ಪ್ರಮಾಣಕ್ಕನುಗುಣವಾಗಿ ಗರಿಷ್ಠ ರೂ.2 ಲಕ್ಷದ ವರೆಗೆ ಪರಿಹಾರ.<br>➢ ಅಪಘಾತದಿಂದ ತಾತ್ಕಾಲಿಕ ದುರ್ಬಲತೆ ಹೊಂದಿದಾಗ-<br>❖ ಅಪಘಾತಕೊಳ್ಳಗಾಗಿ ಆಸ್ಪತ್ರೆಯಲ್ಲಿ 15 ದಿನಗಳಿಗಿಂತ ಕಡಿಮೆ ಅವಧಿಗೆ ಒಳರೋಗಿಯಾಗಿ ಚಿಕಿತ್ಸೆ ಪಡೆದಲ್ಲಿ, ಗರಿಷ್ಠ ರೂ. 50,000/- ರವರೆಗೆ; ಅಥವಾ ನಿಖರ |

| | | |
|---|---|---|
| | | ಆಸ್ಪತ್ರೆ ವೆಚ್ಚ, ಇವುಗಳಲ್ಲಿ ಯಾವುದು ಕಡಿಮೆಯೊ ಅದನ್ನು ಪಾವತಿಸಲಾಗುವುದು.<br>❖ 15 ದಿನಗಳಿಗಿಂತ ಹೆಚ್ಚು ದಿನ ಒಳರೋಗಿಯಾಗಿ ಚಿಕಿತ್ಸೆ ಪಡೆದಿದ್ದಲ್ಲಿ, ಗರಿಷ್ಠ ರೂ. 1 ಲಕ್ಷದ ವರೆಗೆ ಅಥವಾ ನಿಖರ ಆಸ್ಪತ್ರೆ ವೆಚ್ಚ, ಇವುಗಳಲ್ಲಿ ಯಾವುದು ಕಡಿಮೆಯೊ ಅದನ್ನು ಪಾವತಿಸಲಾಗುವುದು.<br>**(ಆ) ಶೈಕ್ಷಣಿಕ ಧನಸಹಾಯ:** ಅಪಘಾತದಿಂದ ನಿಧನರಾದ ಹಾಗೂ ಸಂಪೂರ್ಣ ಶಾಶ್ವತ ದುರ್ಬಲತೆ ಹೊಂದಿದ ಖಾಸಗಿ ವಾಣಿಜ್ಯ ಸಾರಿಗೆ ವಾಹನ ಚಾಲಕರು, ಯೋಜನೆಯಡಿ ನೋಂದಾಯಿತ ನಿರ್ವಾಹಕರು ಹಾಗೂ ಕ್ಲೀನರ್‌ಗಳ ಗರಿಷ್ಠ ಇಬ್ಬರು ಮಕ್ಕಳಿಗೆ 1 ರಿಂದ 12ನೇ ತರಗತಿಯವರೆಗೆ ವ್ಯಾಸಂಗಕ್ಕಾಗಿ ವಾರ್ಷಿಕ ತಲಾ ರೂ.10,000/-ಗಳ ಶೈಕ್ಷಣಿಕ ಧನ ಸಹಾಯ ನೀಡಲಾಗುತ್ತಿದೆ.<br>**(ಇ)ಅಪಘಾತ ಜೀವ ರಕ್ಷಕ ಕಾರ್ಯಕ್ರಮ:** ಅಪಘಾತಕ್ಕೊಳಗಾದ ಗಾಯಾಳುಗಳನ್ನು ರಕ್ಷಿಸುವ ಸ್ವಯಂಸೇವಕರನ್ನು ಸೃಷ್ಟಿಸುವ ಉದ್ದೇಶದಿಂದ ಅಪಘಾತ ಜೀವರಕ್ಷಕ ಕಾರ್ಯಕ್ರಮದಡಿ ಚಾಲಕರಿಗೆ ಪ್ರಥಮ ಚಿಕಿತ್ಸಾ ತರಬೇತಿಯನ್ನು ನೀಡಲಾಗುತ್ತಿದೆ.<br>**(2) ಅಂಬೇಡ್ಕರ್ ಕಾರ್ಮಿಕ ಸಹಾಯ ಹಸ್ತ ಯೋಜನೆ:-**<br>**(ಅ) ಸ್ಮಾರ್ಟ್ ಕಾರ್ಡ್ ಸೌಲಭ್ಯ:** ಯೋಜನೆಯಡಿ ಪ್ರಸ್ತುತ 11 ಅಸಂಘಟಿತ ವರ್ಗಗಳಾದ **"ಹಮಾಲರು, ಮನೆಗೆಲಸದವರು, ಚಿಂದಿ ಆಯುವವರು, ಟೈಲರ್ಸ್, ಮೆಕ್ಯಾನಿಕ್, ಅಗಸರು, ಅಕ್ಕಸಾಲಿಗರು, ಕಮ್ಮಾರರು, ಕುಂಬಾರರು, ಕ್ಷೌರಿಕರು ಹಾಗೂ ಭಟ್ಟಿ ಕಾರ್ಮಿಕ"**ರನ್ನು ನೋಂದಾಯಿಸಿ ಸ್ಮಾರ್ಟ್ ಕಾರ್ಡ್ ವಿತರಿಸಲಾಗುತ್ತಿದೆ.<br>**(ಆ) ಕಾರ್ಮಿಕ ಸೇವಾ ಕೇಂದ್ರ:**<br>➢ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಕಾಯ್ದೆ 2008ರ ಕಲಂ 9ರನ್ವಯ ಫಲಾನುಭವಿಗಳಲ್ಲಿ ಅಸಂಘಟಿತ ಕಾರ್ಮಿಕರಿಗೆ ಲಭ್ಯವಿರುವ ಎಲ್ಲಾ ಯೋಜನೆಗಳ ಕುರಿತು ಮಾಹಿತಿ ನೀಡಲು, ಯೋಜನೆಗಳ ಸೌಲಭ್ಯಗಳನ್ನು ಪಡೆದುಕೊಳ್ಳಲು ಅವಶ್ಯಕವಿರುವ ದಾಖಲಾತಿಗಳನ್ನು ಸಿದ್ಧಪಡಿಸಲು ಹಾಗೂ ನಿಗಧಿಪಡಿಸಿದ ಅರ್ಜಿ ನಮೂನೆಗಳನ್ನು ಭರ್ತಿ ಮಾಡಿ ಸಂಬಂಧಪಟ್ಟವರಿಗೆ ರವಾನಿಸಲು ಸಹಾಯವಾಗುವಂತೆ ರಾಜ್ಯದ ಎಲ್ಲಾ 175 ತಾಲ್ಲೂಕುಗಳಲ್ಲಿ ತಲಾ ಒಂದರಂತೆ ಕಾರ್ಮಿಕ ಸೇವಾ ಕೇಂದ್ರಗಳನ್ನು ಹಾಗೂ ಬೆಂಗಳೂರು ವ್ಯಾಪ್ತಿಯಲ್ಲಿ 6 ಕಾರ್ಮಿಕ ಸೇವಾ ಕೇಂದ್ರಗಳು ಸೇರಿ ಒಟ್ಟು 181 ಕಾರ್ಮಿಕ ಸೇವಾ ಕೇಂದ್ರಗಳನ್ನು ತೆರೆಯಲು ನಿರ್ಣಯಿಸಿದ್ದು, ಈಗಾಗಲೇ 169 ತಾಲ್ಲೂಕುಗಳಲ್ಲಿ ಕಾರ್ಮಿಕ ಸೇವಾ ಕೇಂದ್ರಗಳನ್ನು ಸ್ಥಾಪಿಸಲಾಗಿದೆ. |

| | | |
|---|---|---|
| | | ➢ ಕಾರ್ಮಿಕ ಇಲಾಖೆ ಹಾಗೂ ಅದರ ಅಧೀನದಲ್ಲಿ ಬರುವ ಮಂಡಳಿಗಳು ಅಸಂಘಟಿತ ಕಾರ್ಮಿಕರಿಗೆ ಅನುಷ್ಠಾನಗೊಳಿಸುತ್ತಿರುವ ಯೋಜನೆಗಳ ಕುರಿತು ಮಾಹಿತಿ, ಸಹಾಯ ಹಾಗೂ ಸೌಲಭ್ಯಗಳನ್ನು, ಸದರಿ ಸೇವಾ ಕೇಂದ್ರಗಳಲ್ಲಿ ಕಾರ್ಮಿಕ ಬಂಧುಗಳ ಮೂಲಕ ಪಡೆಯಲು ವ್ಯವಸ್ಥೆ ಮಾಡಲಾಗುತ್ತಿದೆ.<br><br>(3) **ಪ್ರಧಾನ ಮಂತ್ರಿ ಶ್ರಮಯೋಗಿ ಮಾನ್‌ಧನ್ ಯೋಜನೆ (ಪಿಎಂ-ಎಸ್‌ವೈಎಂ):-** ಕೇಂದ್ರ ಸರ್ಕಾರದ ಈ ಯೋಜನೆಯಡಿ 18–40 ವರ್ಷ ವಯೋಮಾನದ ಅಸಂಘಟಿತ ಕಾರ್ಮಿಕರು ನೊಂದಾಯಿಸಿಕೊಂಡು 60 ವರ್ಷ ಪೂರೈಸಿದ ನಂತರ ಮಾಸಿಕ ನಿಶ್ಚಿತ ರೂ.3,000/- ಗಳ ಪಿಂಚಣಿ ಸೌಲಭ್ಯ ಪಡೆಯಬಹುದಾಗಿದೆ. ಈ ಯೋಜನೆಯಡಿ ಫಲಾನುಭವಿಗಳಿಗೆ ಅವರ ವಯಸ್ಸಿನ ಆಧಾರದ ಮೇಲೆ ಮಾಸಿಕ ತಲಾ ರೂ. 55/- ರಿಂದ ರೂ. 200/- ರವರೆಗೆ ಕೇಂದ್ರ ಸರ್ಕಾರವು ಸಮಾನಾಂತರ ವಂತಿಕೆಯನ್ನು ಪಾವತಿಸುತ್ತದೆ.<br><br>(4) **ಎನ್.ಪಿ. ಎಸ್ ಫಾರ್ ಟ್ರೇಡರ್ಸ್ ಯೋಜನೆ:-** ಕೇಂದ್ರ ಸರ್ಕಾರದ ಈ ಯೋಜನೆಯಡಿ ನೋಂದಾಯಿತ ಅಂಗಡಿ ಮಾಲೀಕರು, ಚಿಲ್ಲರೆ ವ್ಯಾಪಾರಿಗಳು, ಅಕ್ಕಿ ಗಿರಣಿ ಮಾಲೀಕರು, ಎಣ್ಣೆ ಗಿರಣಿ ಮಾಲೀಕರು, ವರ್ಕ್‌ಶಾಪ್ ಮಾಲೀಕರು, ಕಮಿಷನ್ ಏಜೆಂಟ್ಸ್, ರಿಯಲ್ ಎಸ್ಟೇಟ್‌ನ ಬ್ರೋಕರ್ಸ್, ಸಣ್ಣ ಹೋಟೆಲ್ ಹಾಗೂ ರೆಸ್ಟೋರೆಂಟ್‌ನ ಮಾಲೀಕರು ಹಾಗೂ ಅಂತಹ ಇತರೆ ಸಣ್ಣ ವ್ಯಾಪಾರಗಳಲ್ಲಿ ತೊಡಗಿಸಿಕೊಂಡ ವ್ಯಾಪಾರಿಗಳು/ಲಘು ವ್ಯಾಪಾರಿಗಳು ಹಾಗೂ ಸ್ವಯಂ ಉದ್ಯೋಗಿಗಳು 60 ವರ್ಷ ಪೂರೈಸಿದ ನಂತರ ಮಾಸಿಕ ನಿಶ್ಚಿತ ರೂ.3000/-ಗಳ ಪಿಂಚಣಿ ಸೌಲಭ್ಯ ಒದಗಿಸಲಾಗುತ್ತದೆ.<br><br>3. **ಕರ್ನಾಟಕ ಕಾರ್ಮಿಕ ಕಲ್ಯಾಣ ಮಂಡಳಿ:**<br>ಈ ಮಂಡಳಿಗೆ ವಂತಿಗೆ ಪಾವತಿಸುವ ಸಂಘಟಿತ ಕಾರ್ಮಿಕರು ಮತ್ತು ಅವರ ಕುಟುಂಬದ ಅವಲಂಬಿತರಿಗೆ ಈ ಕೆಳಕಂಡ ಕಲ್ಯಾಣ ಯೋಜನೆಗಳಡಿಯಲ್ಲಿ ಈ ಕೆಳಕಂಡ ಸೌಲಭ್ಯಗಳನ್ನು ನೀಡಲಾಗುತ್ತಿದೆ.<br>1. ಶೈಕ್ಷಣಿಕ ಪ್ರೋತ್ಸಾಹ ಧನ ಸಹಾಯ<br>2. ವೈದ್ಯಕೀಯ ನೆರವು.<br>3. ಅಪಘಾತ ಧನ ಸಹಾಯ.<br>4. ಮೃತ ಕಾರ್ಮಿಕರ ಅಂತ್ಯ ಸಂಸ್ಕಾರಕ್ಕೆ ಧನ ಸಹಾಯ.<br>5. ವಾರ್ಷಿಕ ವೈದ್ಯಕೀಯ ತಪಾಸಣೆ ಶಿಬಿರಕ್ಕೆ ಧನ ಸಹಾಯ.<br>6. ವಾರ್ಷಿಕ ಕ್ರೀಡಾಕೂಟ ಹಮ್ಮಿಕೊಳ್ಳುವ ಕಾರ್ಮಿಕ ಸಂಘಟನೆಗೆ ಧನ ಸಹಾಯ. |
| ಆ) | ಶಿಡ್ಲಘಟ್ಟ ವಿಧಾನಸಭಾ ಕ್ಷೇತ್ರದ ಕಾರ್ಮಿಕರಿಗೆ ಕಳೆದ ಮೂರು ವರ್ಷಗಳಲ್ಲಿ ಎಷ್ಟು ಅನುದಾನ ಬಿಡುಗಡೆ ಮಾಡಲಾಗಿದೆ; | **1. ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿ** ವತಿಯಿಂದ ಕಳೆದ ಮೂರು ವರ್ಷಗಳಲ್ಲಿ ಶಿಡ್ಲಘಟ್ಟ ವಿಧಾನಸಭಾ ವ್ಯಾಪ್ತಿಯ ನೋಂದಾಯಿತ ಕಾರ್ಮಿಕರಿಗೆ |

| | | |
|---|---|---|
| | | ವಿವಿಧ ಯೋಜನೆಗಳಡಿ ಒಟ್ಟು ರೂ.1,38,84,932/- ಮೊತ್ತವನ್ನು ಬಿಡುಗಡೆ ಮಾಡಲಾಗಿದೆ.<br>**<u>2. ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿ:</u>**<br>ಈ ಮಂಡಳಿಯು ಜಾರಿಗೊಳಿಸುತ್ತಿರುವ ಸಾಮಾಜಿಕ ಭದ್ರತಾ ಯೋಜನೆಗಳಿಗೆ ರಾಜ್ಯ ಸರ್ಕಾರವು ಅಗತ್ಯವಿರುವ ಅನುದಾನವನ್ನು ಅವಶ್ಯಕತೆಗನುಗುಣವಾಗಿ ಮಂಡಳಿಗೆ ಬಿಡುಗಡೆಗೊಳಿಸುತ್ತಿದ್ದು, ವಿಧಾನಸಭಾ ಕ್ಷೇತ್ರವಾರು ಪ್ರತ್ಯೇಕವಾಗಿ ಅನುದಾನವನ್ನು ಬಿಡುಗಡೆ ಮಾಡುತ್ತಿಲ್ಲ. ಆದ್ದರಿಂದ, ಸದರಿ ಸಾಲುಗಳಲ್ಲಿ ಶಿಡ್ಲಘಟ್ಟ ವಿಧಾನಸಭಾ ಕ್ಷೇತ್ರಕ್ಕೆ ಸಂಬಂಧಿಸಿದಂತೆ, ಪ್ರತ್ಯೇಕವಾಗಿ ಯಾವುದೇ ಅನುದಾನವನ್ನು ಬಿಡುಗಡೆಗೊಳಿಸಿರುವುದಿಲ್ಲ.<br>3. **<u>ಕರ್ನಾಟಕ ಕಾರ್ಮಿಕ ಕಲ್ಯಾಣ ಮಂಡಳಿ:</u>**<br>ಶಿಡ್ಲಘಟ್ಟ ವಿಧಾನ ಸಭಾ ಕ್ಷೇತ್ರಕ್ಕೆ ಸರ್ಕಾರದಿಂದ ಪ್ರತ್ಯೇಕವಾಗಿ ಈ ಮಂಡಳಿಗೆ ಯಾವುದೇ ಅನುದಾನ ಬಿಡುಗಡೆಯಾಗಿರುವುದಿಲ್ಲ ಆದರೆ ಶಿಡ್ಲಘಟ್ಟ ವಿಧಾನ ಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿ ಮಂಡಳಿಗೆ ವಂತಿಗೆ ಪಾವತಿಸುವ ಸಂಸ್ಥೆಗಳಲ್ಲಿ ಕೆಲಸ ನಿರ್ವಹಿಸುತ್ತಿರುವ ಸಂಘಟಿತ ಕಾರ್ಮಿಕರು ಮತ್ತು ಅವರ ಕುಟುಂಬದ ಅವಲಂಬಿತರಿಗೆ ಕಲ್ಯಾಣ ಯೋಜನೆಗಳ ಸೌಲಭ್ಯಗಳನ್ನು ನೀಡಲಾಗುತ್ತಿದೆ. |
| ಇ) | ಕಳೆದ ಮೂರು ವರ್ಷಗಳಿಂದ ಸರ್ಕಾರದಿಂದ ಕಾರ್ಮಿಕರಿಗೆ ವಿವಿಧ ಯೋಜನೆಗಳಡಿಯಲ್ಲಿ ನೀಡುತ್ತಿರುವ ಸೌಲಭ್ಯಗಳ ಸಂಪೂರ್ಣ ಮಾಹಿತಿ ನೀಡುವುದು? | **<u>1. ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿ:</u>**<br>ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿ ವತಿಯಿಂದ ಕಳೆದ ಮೂರು ವರ್ಷಗಳಲ್ಲಿ ನೋಂದಾಯಿತ ಕಾರ್ಮಿಕರಿಗೆ ಒದಗಿಸಿರುವ ವಿವಿಧ ಸೌಲಭ್ಯಗಳ ಮಾಹಿತಿಯನ್ನು <u>ಅನುಬಂಧ-2ರಲ್ಲಿ</u> ಲಗತ್ತಿಸಿದೆ.<br>**<u>2. ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿ:</u>**<br>ಈ ಮಂಡಳಿಯು ಅಸಂಘಟಿತ ಕಾರ್ಮಿಕರಿಗೆ ಜಾರಿಗೊಳಿಸುತ್ತಿರುವ ಸಾಮಾಜಿಕ ಭದ್ರತಾ ಯೋಜನೆಗಳಡಿ, ಕಳೆದ ಮೂರು ವರ್ಷಗಳ ಅವಧಿಯಲ್ಲಿ ನೀಡಿರುವ ಸೌಲಭ್ಯಗಳು ಈ ಕೆಳಗಿನಂತಿವೆ:-<br>(1) **<u>ಕರ್ನಾಟಕ ರಾಜ್ಯ ಖಾಸಗಿ ವಾಣಿಜ್ಯ ಸಾರಿಗೆ ಕಾರ್ಮಿಕರ ಅಪಘಾತ ಪರಿಹಾರ ಯೋಜನೆ:-</u>**<br>**(ಅ) ಅಪಘಾತ ಪರಿಹಾರ ಸೌಲಭ್ಯ:** ಸಾರಿಗೆ ಇಲಾಖೆಯಿಂದ ಖಾಸಗಿ ವಾಣಿಜ್ಯ ಸಾರಿಗೆ ವಾಹನ ಚಲಾಯಿಸಲು ಊರ್ಜಿತ ಚಾಲನಾ ಪ್ರಮಾಣಪತ್ರ ಹೊಂದಿದ ಚಾಲಕರ ಅಪಘಾತ ಪ್ರಕರಣಗಳಿಗೆ ಸಂಬಂಧಿಸಿದಂತೆ ಒಟ್ಟು **309** ಪ್ರಕರಣಗಳಲ್ಲಿ **ರೂ.11,11,80,053/-**ಗಳ ಪರಿಹಾರವನ್ನು ನೀಡಲಾಗಿದೆ.<br>**(ಆ) ಶೈಕ್ಷಣಿಕ ಧನ ಸಹಾಯ:** ಅಪಘಾತದ ಕಾರಣ ನಿಧನರಾದ ಅಥವಾ ಸಂಪೂರ್ಣ ಶಾಶ್ವತ ದುರ್ಬಲತೆ ಹೊಂದಿದ ಫಲಾನುಭವಿಗಳ ಇಬ್ಬರು ಮಕ್ಕಳಿಗೆ ಪದವಿಪೂರ್ವ |

| | | |
|---|---|---|
| | | ವ್ಯಾಸಂಗದವರೆಗೆ ವಾರ್ಷಿಕ ತಲಾ ರೂ.10,000/-ಗಳಂತೆ ಒಟ್ಟು **333** ವಿದ್ಯಾರ್ಥಿಗಳಿಗೆ ರೂ.**33,30,000**/-ಗಳ ಶೈಕ್ಷಣಿಕ ಸಹಾಯಧನವನ್ನು ವಿತರಿಸಲಾಗಿದೆ.<br>**(ಇ) ಅಪಘಾತ ಜೀವರಕ್ಷಕ ಕಾರ್ಯಕ್ರಮ:** ಅಪಘಾತ ಜೀವರಕ್ಷಕ ಕಾರ್ಯಕ್ರಮದಡಿ ಒಟ್ಟು **35,868** ಚಾಲಕರಿಗೆ ಪ್ರಥಮ ಚಿಕಿತ್ಸಾ ತರಬೇತಿಯನ್ನು ನೀಡಲಾಗುತ್ತಿದೆ.<br>(2) **ಅಂಬೇಡ್ಕರ್ ಕಾರ್ಮಿಕ ಸಹಾಯ ಹಸ್ತ ಯೋಜನೆ:-** ಈಯೋಜನೆಯಡಿ 11 ವರ್ಗಗಳಾದ **ಹಮಾಲರು, ಗೃಹಕಾರ್ಮಿಕರು, ಚಿಂದಿ ಆಯುವವರು, ಟೈಲರ್‌ಗಳು, ಮೆಕ್ಯಾನಿಕ್ಸ್,** ಅಗಸರು, **ಅಕ್ಕಸಾಲಿಗರು, ಕಮ್ಮಾರರು, ಕುಂಬಾರರು, ಕ್ಷೌರಿಕರು ಹಾಗೂ ಭಟ್ಟಿ ಕಾರ್ಮಿಕ ವೃತ್ತಿಯ ಕಾರ್ಮಿಕರಿಗೆ** ಸ್ಮಾರ್ಟ್ ಕಾರ್ಡ್ ನೀಡುವ ಸಂಬಂಧ **1,63,519** ಅಸಂಘಟಿತ ಕಾರ್ಮಿಕರನ್ನು ನೋಂದಾಯಿಸಲಾಗಿದೆ.<br>(3) **ಕೋವಿಡ್-19ರ ವಿಶೇಷ ಪ್ಯಾಕೇಜ್:-**ರಾಜ್ಯ ಸರ್ಕಾರವು ಕೋವಿಡ್-19ರ ಲಾಕ್‌ಡೌನ್ ಕಾರಣ ಅಗಸರು ಹಾಗೂ ಕ್ಷೌರಿಕ ವೃತ್ತಿಯ ಕಾರ್ಮಿಕರಿಗೆ ಘೋಷಿಸಿದ ತಲಾ ರೂ. 5000/-ಗಳ ಒಂದು ಬಾರಿಯ ವಿಶೇಷ ನೆರವಿನ ಪ್ಯಾಕೇಜ್ ಅಡಿ **65,046** ಅಗಸರು ಹಾಗೂ **56,714** ಕ್ಷೌರಿಕ ವೃತ್ತಿಯಲ್ಲಿ ತೊಡಗಿರುವವರೂ ಸೇರಿ ಒಟ್ಟು **1,21,760** ಫಲಾನುಭವಿಗಳಿಗೆ ಒಟ್ಟು ರೂ.**60,88,00,000**/-ಗಳ ನೆರವನ್ನು ವಿತರಿಸಲಾಗಿದೆ.<br>3. **ಕರ್ನಾಟಕ ಕಾರ್ಮಿಕ ಕಲ್ಯಾಣ ಮಂಡಳಿ** ಈ ಮಂಡಳಿಯಿಂದ ಸಂಘಟಿತ ಕಾರ್ಮಿಕರು ಮತ್ತು ಅವರ ಕುಟುಂಬದ ಅವಲಂಬಿತರಿಗೆ (2017-18 ರಿಂದ 2019-2020) ರವರೆಗೆ ಕಲ್ಯಾಣ ಯೋಜನೆಗಳಡಿ ನೀಡಿರುವ ಸೌಲಭ್ಯಗಳ ವಿವರಗಳನ್ನು ಅನುಬಂಧ-3ರಲ್ಲಿ ಲಗತ್ತಿಸಿದೆ. |

**ಕಾಇ 141 ಎಲ್‌ಇಟಿ 2021**

(ಅರಬೈಲ್ ಶಿವರಾಂ ಹೆಬ್ಬಾರ್)
ಕಾರ್ಮಿಕ ಸಚಿವರು

# ಅನುಬಂಧ-1

## (ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 3891)

ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿವತಿಯಿಂದ ಫಲಾನುಭವಿಗಳಿಗೆ ಸಿಗುವ ಸೌಲಭ್ಯಗಳು

1. ಪಿಂಚಣಿ ಸೌಲಭ್ಯ: ಮೂರು ವರ್ಷ ಸದಸ್ಯತ್ವದೊಂದಿಗೆ 60 ವರ್ಷ ಪೂರೈಸಿದ ಫಲಾನುಭವಿಗೆ ಮಾಸಿಕ ರೂ.2,000/-
2. ಕುಟುಂಬ ಪಿಂಚಣಿ ಸೌಲಭ್ಯ: ಮೃತ ಪಿಂಚಣಿದಾರರ ಪತಿ / ಪತ್ನಿ ಮಾಸಿಕ ರೂ.1000/-
3. ದುರ್ಬಲತೆ ಪಿಂಚಣಿ: ನೋಂದಾಯಿತ ಫಲಾನುಭವಿಯು ಖಾಯಿಲೆಗಳಿಂದ ಅಥವಾ ಕಟ್ಟಡ ಕಾಮಗಾರಿಗಳ ಅಪಘಾತದಿಂದ ಶಾಶ್ವತ/ಭಾಗಶಃ ಅಂಗವಿಕಲತೆ ಹೊಂದಿದ್ದರೆ ಮಾಸಿಕ ರೂ.2,000/- ಪಿಂಚಣಿ ಹಾಗೂ ಶೇಕಡವಾರು ದುರ್ಬಲತೆಯನ್ನಾಧರಿಸಿ ರೂ.2,00,000/- ದವರೆಗೆ ಅನುಗ್ರಹ ರಾಶಿ ಸಹಾಯಧನ.
4. ಕನ್ನಡಕ, ಶ್ರವಣಯಂತ್ರ, ಕೃತಕ ಕೈಕಾಲು ಮತ್ತು ಗಾಲಿ ಕುರ್ಚಿಮರುಪಾವತಿ ಸೌಲಭ್ಯ.
5. ಟ್ರೈನಿಂಗ್-ಕಮ್-ಟೂಲ್‌ಕಿಟ್‌ಸೌಲಭ್ಯ (ಶ್ರಮ ಸಾಮರ್ಥ್ಯ) : ರೂ.30,000/- ವರೆಗೆ
6. ಶ್ರಮ ಸಂಸಾರ ಸಾಮರ್ಥ್ಯ ತರಬೇತಿ ಸೌಲಭ್ಯ: ನೋಂದಾಯಿತ ಫಲಾನುಭವಿಯ ಅವಲಂಭಿತರಿಗೆ
7. ವಸತಿ ಸೌಲಭ್ಯ (ಕಾರ್ಮಿಕ ಗೃಹ ಭಾಗ್ಯ): ರೂ.2,00,000/- ದವರೆಗೆ ಮುಂಗಡ ಸೌಲಭ್ಯ
8. ಹೆರಿಗೆ ಸೌಲಭ್ಯ (ತಾಯಿ ಲಕ್ಷ್ಮೀ ಬಾಂಡ್): ಮಹಿಳಾ ಫಲಾನುಭವಿಯ ಮೊದಲ ಎರಡು ಮಕ್ಕಳಿಗೆ ಹೆಣ್ಣು ಮಗುವಿನ ಜನನಕ್ಕೆ ರೂ. 30,000/- ಮತ್ತು ಗಂಡು ಮಗುವಿನ ಜನನಕ್ಕೆ ರೂ.20,000/-
9. ಶಿಶು ಪಾಲನಾ ಸೌಲಭ್ಯ:
10. ಅಂತ್ಯಕ್ರಿಯೆ ವೆಚ್ಚ : ರೂ.4,000/- ಹಾಗೂ ಅನುಗ್ರಹ ರಾಶಿ ರೂ.50,000/-ಸಹಾಯಧನ
11. ಶೈಕ್ಷಣಿಕ ಸಹಾಯಧನ (ಕಲಿಕೆ ಭಾಗ್ಯ): ಫಲಾನುಭವಿಯ ಇಬ್ಬರು ಮಕ್ಕಳ ವಿದ್ಯಾಭ್ಯಾಸಕ್ಕಾಗಿ:

| ಕ್ರ.ಸಂ | ತರಗತಿ (ಉತ್ತೀರ್ಣಕ್ಕೆ) | ವಾರ್ಷಿಕ ಸಹಾಯ ಧನ | |
|---|---|---|---|
| | | ಗಂಡು | ಹೆಣ್ಣು |
| I. | ನರ್ಸರಿ | 3,000 | 4,000 |
| II. | 1 ರಿಂದ 4ನೇ ತರಗತಿ | 3,000 | 4,000 |
| III. | 5 ರಿಂದ 8ನೇ ತರಗತಿ | 5,000 | 6,000 |
| IV. | 9 ಹಾಗೂ 10ನೇ ತರಗತಿ | 10,000 | 11,000 |
| V. | ಪ್ರಥಮ ಪಿಯುಸಿ ಮತ್ತು ದ್ವಿತೀಯ ಪಿ.ಯು.ಸಿ | 10,000 | 14,000 |
| VI. | ಐಟಿಐ | 12,000 | 15,000 |
| VII. | ಪದವಿ ಪ್ರತಿ ವರ್ಷಕ್ಕೆ | 15,000 | 20,000 |
| VIII. | ಸ್ನಾತಕೋತ್ತರ ಪದವಿ ಸೇರ್ಪಡೆಗೆ | 20,000 | 20,000 |
| | ಮತ್ತು ಪ್ರತಿ ವರ್ಷಕ್ಕೆ | 20,000 | 25,000 |
| IX. | ಇಂಜಿನಿಯರಿಂಗ್ ಕೋರ್ಸ್ ಬಿಇ/ ಬಿ.ಟೆಕ್ ಸೇರ್ಪಡೆಗೆ | 25,000 | 25,000 |
| | ಮತ್ತು ಪ್ರತಿ ವರ್ಷಕ್ಕೆ | 25,000 | 30,000 |
| X. | ವೈದ್ಯಕೀಯ ಕೋರ್ಸ್‌ಗೆ ಸೇರ್ಪಡೆಗೆ | 30,000 | 30,000 |
| | ಮತ್ತು ಪ್ರತಿ ವರ್ಷಕ್ಕೆ | 40,000 | 50,000 |
| XI. | ಡಿಪ್ಲೋಮಾ | 15,000 | 20,000 |
| XII. | ಎಂ.ಟೆಕ್ / ಎಂ.ಇ | 30,000 | 35,000 |
| XIII. | ಎಂ.ಡಿ (ವೈದ್ಯಕೀಯ) | 45,000 | 55,000 |
| XIV. | ಪಿಹೆಚ್‌ಡಿ (ಪ್ರತಿ ವರ್ಷಕ್ಕೆ) ಗರಿಷ್ಠ 03 ವರ್ಷ | 25,000 | 30,000 |

12. ವೈದ್ಯಕೀಯ ಸಹಾಯಧನ (ಕಾರ್ಮಿಕ ಆರೋಗ್ಯ ಭಾಗ್ಯ): ನೋಂದಾಯಿತ ಫಲಾನುಭವಿ ಹಾಗೂ ಅವರ ಅವಲಂಭಿತರಿಗೆ ರೂ.300/- ರಿಂದ ರೂ.10,000/-ವರೆಗೆ
13. ಅಪಘಾತ ಪರಿಹಾರ: ಮರಣ ಹೊಂದಿದ್ದಲ್ಲಿ ರೂ.5,00,000/-, ಸಂಪೂರ್ಣ ಶಾಶ್ವತ ದುರ್ಬಲತೆಯಾದಲ್ಲಿ ರೂ.2,00,000/- ಮತ್ತು ಭಾಗಶಃ ಶಾಶ್ವತ ದುರ್ಬಲತೆಯಾದಲ್ಲಿ ರೂ.1,00,000/-
14. ಪ್ರಮುಖ ವೈದ್ಯಕೀಯ ವೆಚ್ಚ ಸಹಾಯಧನ (ಕಾರ್ಮಿಕ ಚಿಕಿತ್ಸಾ ಭಾಗ್ಯ): ಹೃದ್ರೋಗ, ಕಿಡ್ನಿ ಜೋಡಣೆ, ಕ್ಯಾನ್ಸರ್ ಶಸ್ತ್ರಚಿಕಿತ್ಸೆ, ಕಣ್ಣಿನ ಶಸ್ತ್ರಚಿಕಿತ್ಸೆ, ಪಾರ್ಶ್ವವಾಯು, ಮೂಳೆ ಶಸ್ತ್ರಚಿಕಿತ್ಸೆ, ಗರ್ಭಕೋಶ ಶಸ್ತ್ರಚಿಕಿತ್ಸೆ, ಅಸ್ತಮ ಚಿಕಿತ್ಸೆ, ಗರ್ಭಪಾತ ಪ್ರಕರಣಗಳು, ಪಿತ್ತಕೋಶದ ತೊಂದರೆಗೆ ಸಂಬಂಧಿತ ಚಿಕಿತ್ಸೆ, ಮೂತ್ರ ಪಿಂಡದಲ್ಲಿನ ಕಲ್ಲು ತೆಗೆಯುವ ಚಿಕಿತ್ಸೆ, ಮೆದುಳಿನ ರಕ್ತಸ್ರಾವದ ಚಿಕಿತ್ಸೆ, ಅಲ್ಸರ್ ಚಿಕಿತ್ಸೆ, ಡಯಾಲಿಸಿಸ್ ಚಿಕಿತ್ಸೆ, ಕಿಡ್ನಿ ಶಸ್ತ್ರಚಿಕಿತ್ಸೆ, ಇ.ಎನ್.ಟಿ. ಚಿಕಿತ್ಸೆ ಮತ್ತು ಶಸ್ತ್ರಚಿಕಿತ್ಸೆ, ನರರೋಗ ಶಸ್ತ್ರಚಿಕಿತ್ಸೆ, ವ್ಯಾಸ್ಕ್ಯೂಲರ್ ಶಸ್ತ್ರಚಿಕಿತ್ಸೆ, ಅನ್ನನಾಳದ ಚಿಕಿತ್ಸೆ ಮತ್ತು ಶಸ್ತ್ರಚಿಕಿತ್ಸೆ, ಕರುಳಿನ ಶಸ್ತ್ರಚಿಕಿತ್ಸೆ, ಸ್ತನ ಸಂಬಂಧಿತ ಚಿಕಿತ್ಸೆ ಮತ್ತು ಶಸ್ತ್ರಚಿಕಿತ್ಸೆ, ಹರ್ನಿಯ ಶಸ್ತ್ರಚಿಕಿತ್ಸೆ, ಅಪೆಂಡಿಕ್ಸ್ ಶಸ್ತ್ರಚಿಕಿತ್ಸೆ, ಮೂಳೆ ಮುರಿತ/ಡಿಸ್‌ಲೊಕೇಶನ್ ಚಿಕಿತ್ಸೆ, ಇತರೆ ಔದ್ಯೋಗಿಕ ಖಾಯಿಲೆಗಳ ಚಿಕಿತ್ಸೆಗಳಿಗೆ ರೂ.2,00,000/-ವರೆಗೆ
15. ಮದುವೆ ಸಹಾಯಧನ (ಗೃಹ ಲಕ್ಷ್ಮೀ ಬಾಂಡ್): ಫಲಾನುಭವಿ ಅಥವಾ ಅವರ ಇಬ್ಬರು ಮಕ್ಕಳ ಮದುವೆಗೆ ತಲಾ ರೂ.50,000/-
16. LPG ಸಂಪರ್ಕ ಸೌಲಭ್ಯ (ಕಾರ್ಮಿಕ ಅನಿಲ ಭಾಗ್ಯ): ಅನಿಲ ಸಂಪರ್ಕದೊಂದಿಗೆಎರಡು ಬರ್ನರ್ ಸ್ಟೌವ್
17. ಬಿಎಂಟಿಸಿ ಬಸ್ ಪಾಸ್ ಸೌಲಭ್ಯ: ಬೆಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಯಲ್ಲಿ ಕೆಲಸ ಮಾಡುತ್ತಿರುವಂತಹ / ವಾಸಸ್ಥಳದಿಂದ ಬೆಂಗಳೂರಿಗೆ ಪ್ರಯಾಣಿಸುವ ನೋಂದಾಯಿತ ಕಟ್ಟಡ ಕಾರ್ಮಿಕರಿಗೆ
18. ಕೆಎಸ್‌ಆರ್‌ಟಿಸಿ ಬಸ್ ಪಾಸ್‌ನ ಸೌಲಭ್ಯ: ರಾಜ್ಯಾದ್ಯಂತ ವಿದ್ಯಾಭ್ಯಾಸದಲ್ಲಿ ತೊಡಗಿರುವ ನೋಂದಾಯಿತ ಕಾರ್ಮಿಕರ ಇಬ್ಬರು ಮಕ್ಕಳಿಗೆ (ಈ ಯೋಜನೆಯನ್ನು ಜಾರಿಗೊಳಿಸಲಾಗುತ್ತಿದೆ)
19. ತಾಯಿ ಮಗು ಸಹಾಯ ಹಸ್ತ: ಮಹಿಳಾ ಫಲಾನುಭವಿಯು ಮಗುವಿಗೆ ಜನ್ಮ ನೀಡಿದ ಸಂದರ್ಭದಲ್ಲಿ ಆಕೆಯ ಮಗುವಿನ ಶಾಲಾ ಪೂರ್ವ ಶಿಕ್ಷಣ ಮತ್ತು ಪೌಷ್ಠಿಕತೆಗಾಗಿ ಮಗುವಿಗೆ ಮೂರು ವರ್ಷಗಳು ತುಂಬುವವರೆಗೆ ವಾರ್ಷಿಕ ರೂ.6,000/- ಗಳ ಸಹಾಯಧನ.

# ಅನುಬಂಧ-2

## (ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 3891)

| ಕಳೆದ ಮೂರು ವರ್ಷದಲ್ಲಿ ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿವತಿಯಿಂದ ಕಲ್ಯಾಣ ಮತ್ತು ಸಾಮಾಜಿಕ ಭದ್ರತಾ ಸೌಲಭ್ಯಗಳಡಿಯಲ್ಲಿ ವಿತರಿಸಲಾದ ವರ್ಷವಾರು ಸಾಧನೆಯ ವಿವರ | | | | | | |
|---|---|---|---|---|---|---|
| ಸೌಲಭ್ಯಗಳ ವಿವರ | 2018-19 | | 2019-20 | | 2020-21 | |
| | ಸಂಖ್ಯೆ | ಮೊತ್ತ (ರೂ.ಗಳಲ್ಲಿ) | ಸಂಖ್ಯೆ | ಮೊತ್ತ (ರೂ.ಗಳಲ್ಲಿ) | ಸಂಖ್ಯೆ | ಮೊತ್ತ (ರೂ.ಗಳಲ್ಲಿ) |
| ಶೈಕ್ಷಣಿಕ ಧನಸಹಾಯ | 95,637 | 533,279,365 | 125,403 | 724,788,917 | 100,168 | 735,327,640 |
| ಮದುವೆ ಧನಸಹಾಯ | 11,380 | 475,875,000 | 10,966 | 453,596,000 | 14,784 | 379,665,000 |
| ಅಂತ್ಯ ಸಂಸ್ಕಾರಕ್ಕೆ ವೆಚ್ಚ | 2,208 | 117,282,000 | 3,674 | 198,641,000 | 2,788 | 150,790,000 |
| ಪ್ರಮುಖ ವೈದ್ಯಕೀಯ | 530 | 12,829,473 | 778 | 22,668,307 | 1,125 | 41,473,646 |
| ಅಪಘಾತ ಪರಿಹಾರ | 58 | 13,781,000 | 116 | 31,957,000 | 123 | 20,559,000 |
| ಹೆರಿಗೆ ಧನಸಹಾಯ | 552 | 9,160,000 | 572 | 11,930,174 | 55 | 1,100,000 |
| ವೈದ್ಯಕೀಯ ವೆಚ್ಚ | 192 | 5,592,698 | 95 | 2,019,557 | 206 | 2,512,933 |
| ಪಿಂಚಣಿ ಸೌಲಭ್ಯ | 520 | 12,052,000 | 627 | 23,026,000 | 2,410 | 23,478,000 |
| ದುರ್ಬಲತೆ ಪಿಂಚಣಿ | 7 | 1,214,000 | 18 | 2,999,000 | 40 | 1,270,000 |
| ಕುಟುಂಬ ಪಿಂಚಣಿ | 0 | 0 | 0 | 0 | 11 | 17,000 |
| ಶ್ರಮ ಸಾಮರ್ಥ್ಯ | 3,157 | 56,972,953 | 623 | 90,170,239 | 0 | 0 |
| ಬಿಎಂಟಿಸಿ ಬಸ್ ಪಾಸ್ | 1,602 | 0 | 2,996 | 594,300 | 45,281 | 384,878,550 |
| ವಸತಿ ಸೌಲಭ್ಯ | 0 | 0 | 5,129 | 760,000,000 | 0 | 0 |
| ಶಿಶು ಪಾಲನಾ ಕೇಂದ್ರಗಳ ಸ್ಥಾಪನೆ | 0 | 0 | 501 | 3,000,000 | 218 | 5,763,296 |
| ತಾಯಿ ಮಗು ಸಹಾಯ ಹಸ್ತ | 0 | 0 | 0 | 0 | 27 | 162,000 |
| **ಒಟ್ಟು** | **115,843** | **1,238,038,489** | **151,498** | **2,325,390,494** | **167,236** | **1,746,997,065** |

# ಅನುಬಂಧ-3

(ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 3891)

## ಕರ್ನಾಟಕ ಕಾರ್ಮಿಕ ಕಲ್ಯಾಣ ಮಂಡಳಿ

**2017-18 ನೇ ಸಾಲಿನಿಂದ 2019-20ನೇ ಸಾಲಿನವರೆಗೆ ಕಲ್ಯಾಣ ಯೋಜನೆಗಳಡಿ ಸಂಘಟಿತ ಕಾರ್ಮಿಕರು ಮತ್ತು ಅವರ ಕುಟುಂಬದ ಅವಲಂಬಿತರಿಗೆ ನೀಡಿರುವ ವಿವಿಧ ಸೌಲಭ್ಯಗಳ ವಿವರ ಈ ಕೆಳಕಂಡಂತಿರುತ್ತದೆ.**

| ಕ್ರ ಸ | ವರ್ಷ | 2017-18 | | 2018-19 | | 2019-20 | |
|---|---|---|---|---|---|---|---|
| | ಯೋಜನೆಗಳ ವಿವರ | ಫಲಾನುಭವಿಗಳ ಸಂಖ್ಯೆ | ಮೊತ್ತ ರೂ. | ಫಲಾನುಭವಿಗಳ ಸಂಖ್ಯೆ | ಮೊತ್ತ ರೂ. | ಫಲಾನುಭವಿಗಳ ಸಂಖ್ಯೆ | ಮೊತ್ತ ರೂ. |
| 1 | ಶೈಕ್ಷಣಿಕ ಪ್ರೋತ್ಸಾಹ ಧನ ಸಹಾಯ | 17,414 | 7,11,40,200 | 21,127 | 8,57,34,000 | 26,257 | 10,51,98,000 |
| 2 | ವೈದ್ಯಕೀಯ ನೆರವು. | 05 | 50,000 | 9 | 74,011 | 5 | 45,252 |
| 3 | ಮೃತ ಕಾರ್ಮಿಕನ ಅಂತ್ಯ ಸಂಸ್ಕಾರಕ್ಕೆ ಧನ ಸಹಾಯ. | 302 | 15,10,000 | 326 | 16,30,000 | 295 | 14,75,000 |
| 4 | ಕಾರ್ಮಿಕರ ಅಪಘಾತ ಧನ ಸಹಾಯ | 1 | 3000 | 1 | 3,000 | - | - |
| 5 | ಅಂಗವಿಕಲ ಕಾರ್ಮಿಕರಿಗೆ ಕೃತಕ ಅಂಗಸಾಧನ ಖರೀದಿಸಲು ಧನ ಸಹಾಯ | - | - | 1 | 5,000 | - | - |
| 6 | ವೈದ್ಯಕೀಯ ತಪಾಸಣಾ ಶಿಬಿರ | 466 (1 ಸಂಘಟನೆ) | 20,000 | - | - | 400 (2 ಸಂಘಟನೆ) | 60,000 |
| 7 | ವಾರ್ಷಿಕ ಕ್ರೀಡಾ ಚಟುವಟಿಕೆ | 500 (2 ಸಂಘಟನೆ) | 1,00,000 | 700 (1 ಸಂಘಟನೆ) | 50,000 | 600 (2 ಸಂಘಟನೆ) | 1,00,000 |
| | ಒಟ್ಟು | 18,688 | 7,28,23,200 | 22,164 | 8,74,96,011 | 27,557 | 10,68,78,252 |

ಕರ್ನಾಟಕ ಸರ್ಕಾರ

ಸಂಖ್ಯೆ: ಕಾಇ 140 ಎಲ್‌ಇಟಿ 2021

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸಸೌಧ,
ಬೆಂಗಳೂರು, ದಿನಾಂಕ:20/03/2021

**ಇವರಿಂದ:**
ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ,
ಕಾರ್ಮಿಕ ಇಲಾಖೆ,
ವಿಕಾಸಸೌಧ, ಬೆಂಗಳೂರು.

**ಇವರಿಗೆ:**
ಕಾರ್ಯದರ್ಶಿ,
ಕರ್ನಾಟಕ ವಿಧಾನ ಸಭೆ
ವಿಧಾನಸೌಧ, ಬೆಂಗಳೂರು.

ಮಾನ್ಯರೆ,

ವಿಷಯ: ಮಾನ್ಯ ವಿಧಾನ ಸಭೆಯ ಸದಸ್ಯರಾದ ಶ್ರೀ ವೆಂಕಟರೆಡ್ಡಿ ಮುದ್ನಾಳ್ (ಯಾದಗಿರಿ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 3822ಕ್ಕೆ ಉತ್ತರ ಸಲ್ಲಿಸುವ ಕುರಿತು.

*******

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನ ಸಭೆಯ ಸದಸ್ಯರಾದ ಶ್ರೀ ವೆಂಕಟರೆಡ್ಡಿ ಮುದ್ನಾಳ್ (ಯಾದಗಿರಿ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 3822ಕ್ಕೆ ಉತ್ತರದ 20 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಮುಂದಿನ ಸೂಕ್ತ ಕ್ರಮಕ್ಕಾಗಿ ತಮಗೆ ಕಳುಹಿಸಿಕೊಡಲು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮ ವಿಶ್ವಾಸಿ,

(ಪ್ರದೀಪ್ ಕುಮಾರ್ ಬಿ.ಎಸ್)
ಸರ್ಕಾರದ ಅಧೀನ ಕಾರ್ಯದರ್ಶಿ,
ಕಾರ್ಮಿಕ ಇಲಾಖೆ.

# ಕರ್ನಾಟಕ ವಿಧಾನ ಸಭೆ

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ 3822
2. ಮಾನ್ಯ ಸದಸ್ಯರ ಹೆಸರು ಶ್ರೀ ವೆಂಕಟರೆಡ್ಡಿ ಮುದ್ನಾಳ್ (ಯಾದಗಿರಿ)
3. ಉತ್ತರಿಸಬೇಕಾದ ದಿನಾಂಕ 25/03/2021
4. ಉತ್ತರಿಸುವವರು ಮಾನ್ಯ ಕಾರ್ಮಿಕ ಸಚಿವರು

<table>
<tr><th>ಕ್ರ. ಸಂ.</th><th>ಪ್ರಶ್ನೆ</th><th>ಉತ್ತರ</th></tr>
<tr><td>ಅ)</td><td>ಕಾರ್ಮಿಕ ಇಲಾಖೆಯಿಂದ ಯಾದಗಿರಿ ವಿಧಾನಸಭಾ ಕ್ಷೇತ್ರ ವ್ಯಾಪ್ತಿಯಲ್ಲಿ ಕಟ್ಟಡ ನಿರ್ಮಾಣ ಕಾರ್ಮಿಕರಿಗೆ, ಕೃಷಿ ಕಾರ್ಮಿಕರಿಗೆ ಮತ್ತು ಅಸಂಘಟಿತ ಕಾರ್ಮಿಕರಿಗೆ ದೊರೆಯುವ ಸೌಲಭ್ಯಗಳು ಯಾವುವು; ಎಷ್ಟು ಕಾರ್ಮಿಕರು ಇಲ್ಲಿಯವರೆಗೆ ಸೌಲಭ್ಯಗಳನ್ನು ಪಡೆದು ಕೊಂಡಿದ್ದಾರೆ;</td><td>ಕಾರ್ಮಿಕ ಇಲಾಖೆಯ ಅಧೀನದಲ್ಲಿ ಕೆಲಸ ನಿರ್ವಹಿಸುತ್ತಿರುವ ಮೂರು ಮಂಡಳಿಗಳ ಮೂಲಕ ಜಾರಿಗೊಳಿಸುತ್ತಿರುವ ಸೌಲಭ್ಯಗಳ ವಿವರಗಳು ಈ ಕೆಳಗಿನಂತಿವೆ.<br><br>1. <u>ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿ:-</u><br>ಈ ಮಂಡಳಿಯು ರಾಜ್ಯದಾದ್ಯಂತ ಅಸಂಘಟಿತ ಕಾರ್ಮಿಕರಿಗೆ ಸಾಮಾಜಿಕ ಭದ್ರತೆ ಒದಗಿಸಲು, ಈ ಕೆಳಕಂಡ ಯೋಜನೆಗಳನ್ನು ಅನುಷ್ಠಾನಗೊಳಿಸುತ್ತಿದೆ.<br><br>(1) <u>ಕರ್ನಾಟಕ ರಾಜ್ಯ ಖಾಸಗಿ ವಾಣಿಜ್ಯ ಸಾರಿಗೆ ಕಾರ್ಮಿಕರ ಅಪಘಾತ ಪರಿಹಾರ ಯೋಜನೆ:-</u><br>ಊರ್ಜಿತ ಖಾಸಗಿ ವಾಣಿಜ್ಯ ಸಾರಿಗೆ ವಾಹನ ಚಾಲನ ಪರವಾನಗಿ ಹೊಂದಿರುವ ಚಾಲಕರಿಗೆ ಅಪಘಾತ ಪರಿಹಾರ ಸೌಲಭ್ಯ ಒದಗಿಸುವ ಈ ಯೋಜನೆಯಡಿ, ಸಾರಿಗೆ ಇಲಾಖೆಯು ಒದಗಿಸಿರುವ ದತ್ತಾಂಶದ ಪ್ರಕಾರ ಯಾದಗಿರಿ ಜಿಲ್ಲೆಯಲ್ಲಿ 7,291 ಚಾಲಕರಿದ್ದು, ಎಲ್ಲಾ ಚಾಲಕರು ಈ ಯೋಜನೆಯಡಿ ಫಲಾನುಭವಿಗಳಾಗಿರುತ್ತಾರೆ.<br>ಈ ಯೋಜನೆಯಡಿ ಕೆಳಕಂಡ ಸೌಲಭ್ಯಗಳನ್ನು ನೀಡಲಾಗುತ್ತಿದೆ.<br><br>(ಅ) ಅಪಘಾತ ಪರಿಹಾರ:-<br>➢ ಅಪಘಾತದಿಂದ ಚಾಲಕರು, ನಿರ್ವಾಹಕರು ಹಾಗೂ ಕ್ಲೀನರ್‌ಗಳು ಮರಣ ಹೊಂದಿದಲ್ಲಿ, ಅವರ ನಾಮನಿರ್ದೇಶಿತರಿಗೆ ರೂ. 5 ಲಕ್ಷ ಪರಿಹಾರ.<br>➢ ಅಪಘಾತದಿಂದ ಶಾಶ್ವತ ದುರ್ಬಲತೆ ಹೊಂದಿದಾಗ, ಫಲಾನುಭವಿಗೆ ದುರ್ಬಲತೆಯ ಪ್ರಮಾಣಕ್ಕನುಗುಣವಾಗಿ ಗರಿಷ್ಠ ರೂ. 2 ಲಕ್ಷದ ವರೆಗೆ ಪರಿಹಾರ.<br>➢ ಅಪಘಾತದಿಂದ ತಾತ್ಕಾಲಿಕ ದುರ್ಬಲತೆ ಹೊಂದಿದಾಗ-<br>❖ ಅಪಘಾತಕ್ಕೊಳಗಾಗಿ ಆಸ್ಪತ್ರೆಯಲ್ಲಿ 15 ದಿನಗಳಿಗಿಂತ ಕಡಿಮೆ ಅವಧಿಗೆ ಒಳರೋಗಿಯಾಗಿ ಚಿಕಿತ್ಸೆ ಪಡೆದಲ್ಲಿ, ಗರಿಷ್ಠ ರೂ. 50,000/- ರವರೆಗೆ; ಅಥವಾ ನಿಖರ ಆಸ್ಪತ್ರೆ ವೆಚ್ಚ, ಇವುಗಳಲ್ಲಿ ಯಾವುದು ಕಡಿಮೆಯೊ ಅದನ್ನು ಪಾವತಿಸಲಾಗುವುದು.</td></tr>
</table>

❖15 ದಿನಗಳಿಗಿಂತ ಹೆಚ್ಚು ದಿನ ಒಳರೋಗಿಯಾಗಿ ಚಿಕಿತ್ಸೆ ಪಡೆದಿದ್ದಲ್ಲಿ, ಗರಿಷ್ಠ ರೂ. 1 ಲಕ್ಷದ ವರೆಗೆ ಅಥವಾ ನಿಖರ ಆಸ್ಪತ್ರೆ ವೆಚ್ಚ, ಇವುಗಳಲ್ಲಿ ಯಾವುದು ಕಡಿಮೆಯೊ ಅದನ್ನು ಪಾವತಿಸಲಾಗುವುದು.

**ಯಾದಗಿರಿ ಜಿಲ್ಲೆಗೆ ಸಂಬಂಧಿಸಿದಂತೆ, ಈವರೆಗೆ ಯಾವುದೇ ಖಾಸಗಿ ವಾಣಿಜ್ಯ ವಾಹನ ಚಾಲಕರು ಪರಿಹಾರ ಕೋರಿ ಅರ್ಜಿ ಸಲ್ಲಿಸಿರುವುದಿಲ್ಲ.**

(ಆ) <u>ಶೈಕ್ಷಣಿಕ ಧನಸಹಾಯ:-</u>

ಅಪಘಾತದಿಂದ ನಿಧನರಾದ ಹಾಗೂ ಸಂಪೂರ್ಣ ಶಾಶ್ವತ ದುರ್ಬಲತೆ ಹೊಂದಿದ ಖಾಸಗಿ ವಾಣಿಜ್ಯ ಸಾರಿಗೆ ವಾಹನ ಚಾಲಕರು, ಯೋಜನೆಯಡಿ ನೋಂದಾಯಿತ ನಿರ್ವಾಹಕರು ಹಾಗೂ ಕ್ಲೀನರ್‌ಗಳ ಗರಿಷ್ಠ ಇಬ್ಬರು ಮಕ್ಕಳಿಗೆ 1 ರಿಂದ 12ನೇ ತರಗತಿಯವರೆಗೆ ವ್ಯಾಸಂಗಕ್ಕಾಗಿ ವಾರ್ಷಿಕ ತಲಾ ರೂ.10,000/-ಗಳ ಶೈಕ್ಷಣಿಕ ಧನ ಸಹಾಯ ನೀಡಲಾಗುತ್ತಿದೆ.

**ಯಾದಗಿರಿ ಜಿಲ್ಲೆಗೆ ಸಂಬಂಧಿಸಿದಂತೆ, ಈವರೆಗೆ ಯಾವುದೇ ಫಲಾನುಭವಿಯು ಈ ಸೌಲಭ್ಯವನ್ನು ಪಡೆದಿರುವುದಿಲ್ಲ.**

(ಇ) **ಅಪಘಾತ ಜೀವ ರಕ್ಷಕ:-** ಅಪಘಾತಕ್ಕೊಳಗಾದ ಗಾಯಾಳುಗಳನ್ನು ರಕ್ಷಿಸುವ ಸ್ವಯಂಸೇವಕರನ್ನು ಸೃಷ್ಟಿಸುವ ಉದ್ದೇಶದಿಂದ ಅಪಘಾತ ಜೀವರಕ್ಷಕ ಕಾರ್ಯಕ್ರಮದಡಿ ಚಾಲಕರಿಗೆಪ್ರಥಮ ಚಿಕಿತ್ಸಾ ತರಬೇತಿಯನ್ನು ನೀಡಲಾಗುತ್ತಿದೆ.

**ಯಾದಗಿರಿ ಜಿಲ್ಲೆಯಲ್ಲಿ ಈವರೆಗೆ 750 ಚಾಲಕರುಗಳಿಗೆ ಪ್ರಥಮ ಚಿಕಿತ್ಸಾ ತರಬೇತಿ ನೀಡಲಾಗಿದೆ.**

(2) <u>ಅಂಬೇಡ್ಕರ್ ಕಾರ್ಮಿಕ ಸಹಾಯ ಹಸ್ತ ಯೋಜನೆ:-</u>

(ಅ) **"ಸ್ಮಾರ್ಟ್ ಕಾರ್ಡ್":-** ಯೋಜನೆಯಡಿ ಪ್ರಸ್ತುತ 11 ಅಸಂಘಟಿತ ವರ್ಗಗಳಾದ "ಹಮಾಲರು, ಮನೆಗೆಲಸದವರು, ಚಿಂದಿ ಆಯುವವರು, ಟೈಲರ್ಸ್, ಮೆಕ್ಯಾನಿಕ್, ಅಗಸರು, ಅಕ್ಕಸಾಲಿಗರು, ಕಮ್ಮಾರರು, ಕುಂಬಾರರು, ಕ್ಷೌರಿಕರು ಹಾಗೂ ಭಟ್ಟಿ ಕಾರ್ಮಿಕ" ರನ್ನು ನೋಂದಾಯಿಸಿ ಸ್ಮಾರ್ಟ್ ಕಾರ್ಡ್ ವಿತರಿಸಲಾಗುತ್ತಿದೆ.

**ಯಾದಗಿರಿ ಜಿಲ್ಲೆಗೆ ಸಂಬಂಧಿಸಿದಂತೆ ಈವರೆಗೆ 1,891 ಅಸಂಘಟಿತ ಕಾರ್ಮಿಕರು ಯೋಜನೆಯಡಿ ಫಲಾನುಭವಿಗಳಾಗಿ ನೋಂದಾಯಿಸಿಕೊಂಡಿರುತ್ತಾರೆ.**

3) (ಅ) **ಪ್ರಧಾನ ಮಂತ್ರಿ ಶ್ರಮಯೋಗಿ ಮಾನ್‌ಧನ್ ಯೋಜನೆ (ಪಿಎಂ-ಎಸ್‌ವೈಎಂ):-** ಕೇಂದ್ರ ಸರ್ಕಾರದ ಈ ಯೋಜನೆಯಡಿ 18-40 ವರ್ಷ ವಯೋಮಾನದ ಅಸಂಘಟಿತ ಕಾರ್ಮಿಕರು ನೊಂದಾಯಿಸಿಕೊಂಡು 60 ವರ್ಷ ಪೂರೈಸಿದ ನಂತರ ಮಾಸಿಕ ನಿಶ್ಚಿತ ರೂ.3,000/- ಗಳ ಪಿಂಚಣಿ ಸೌಲಭ್ಯ ಪಡೆಯಬಹುದಾಗಿದೆ. ಈ ಯೋಜನೆಯಡಿ ಫಲಾನುಭವಿಗಳಿಗೆ ಅವರ ವಯಸ್ಸಿನ ಆಧಾರದ ಮೇಲೆ ಮಾಸಿಕ ತಲಾ ರೂ. 55/- ರಿಂದ ರೂ. 200/- ರವರೆಗೆ

<table>
<tr>
<td></td>
<td></td>
<td>ಕೇಂದ್ರ ಸರ್ಕಾರವು ಸಮಾನಾಂತರ ವಂತಿಕೆಯನ್ನು ಪಾವತಿಸುತ್ತದೆ. ಯಾದಗಿರಿ ಜಿಲ್ಲೆಗೆ ಸಂಬಂಧಿಸಿದಂತೆ ಈವರೆಗೆ 2,445 ಫಲಾನುಭವಿಗಳು ಯೋಜನೆಯಡಿ ನೋಂದಾಯಿಸಿಕೊಂಡಿರುತ್ತಾರೆ.<br><br>(ಆ) ಎನ್.ಪಿ. ಎಸ್ ಫಾರ್ ಟ್ರೇಡರ್ಸ್ ಯೋಜನೆ<br>ಈ ಯೋಜನೆಯಡಿ ನೋಂದಾಯಿತ ಅಂಗಡಿ ಮಾಲೀಕರು, ಚಿಲ್ಲರೆ ವ್ಯಾಪಾರಿಗಳು, ಅಕ್ಕಿ ಗಿರಣಿ ಮಾಲೀಕರು, ಎಣ್ಣೆ ಗಿರಣಿ ಮಾಲೀಕರು, ವರ್ಕ್‌ಶಾಪ್ ಮಾಲೀಕರು, ಕಮಿಷನ್ ಏಜೆಂಟ್ಸ್, ರಿಯಲ್ ಎಸ್ಟೇಟ್‌ನ ಬ್ರೋಕರ್ಸ್, ಸಣ್ಣ ಹೋಟೆಲ್ ಹಾಗೂ ರೆಸ್ಟೋರೆಂಟ್‌ನ ಮಾಲೀಕರು ಹಾಗೂ ಅಂತಹ ಇತರೆ ಸಣ್ಣ ವ್ಯಾಪಾರಗಳಲ್ಲಿ ತೊಡಗಿಸಿಕೊಂಡ ವ್ಯಾಪಾರಿಗಳು/ಲಘು ವ್ಯಾಪಾರಿಗಳು ಹಾಗೂ ಸ್ವಯಂ ಉದ್ಯೋಗಿಗಳು 60 ವರ್ಷ ಪೂರೈಸಿದ ನಂತರ ಮಾಸಿಕ ನಿಶ್ಚಿತ ರೂ.3000/-ಗಳ ಪಿಂಚಣಿ ಸೌಲಭ್ಯ ಒದಗಿಸಲಾಗುತ್ತದೆ. ಯಾದಗಿರಿ ಜಿಲ್ಲೆಗೆ ಸಂಬಂಧಿಸಿದಂತೆ ಈವರೆಗೆ 13 ಫಲಾನುಭವಿಗಳು ಯೋಜನೆಯಡಿ ನೋಂದಾಯಿಸಿಕೊಂಡಿರುತ್ತಾರೆ.<br><br>2. ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿ:<br>ಈ ಮಂಡಳಿ ವತಿಯಿಂದ ನೊಂದಾಯಿತ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರಿಗೆ ಮತ್ತು ಅವರ ಅವಲಂಬಿತರಿಗಾಗಿ 19 ರೀತಿಯ ಕಲ್ಯಾಣ ಮತ್ತು ಸಾಮಾಜಿಕ ಭದ್ರತಾ ಸೌಲಭ್ಯಗಳನ್ನು ರೂಪಿಸಿ ಮಂಡಳಿಯಿಂದ ಅನುಷ್ಠಾನಗೊಳಿಸಲಾಗುತ್ತಿದೆ. ವಿವರವನ್ನು <u>ಅನುಬಂಧ-1ರಲ್ಲಿ</u> ಸಲ್ಲಿಸಿದೆ.<br><br>ಈ ಸೌಲಭ್ಯಗಳಡಿ ಇದುವರೆಗೂ ಯಾದಗಿರಿ ಜಿಲ್ಲೆಯಲ್ಲಿ ನೋಂದಾಯಿತ 7,104 ಫಲಾನುಭವಿಗಳು ವಿವಿಧ ಸೌಲಭ್ಯಗಳಡಿ ಮಂಡಳಿವತಿಯಿಂದ ಸಹಾಯ ಧನ ಪಡೆದುಕೊಂಡಿರುತ್ತಾರೆ.</td>
</tr>
<tr>
<td>ಆ)</td>
<td>ಅವರಿಗಾಗಿ ಎಷ್ಟು ಅನುದಾನ ನೀಡಲಾಗಿದೆ; (ಕಳೆದ ಮೂರು ವರ್ಷಗಳ ಸಂಪೂರ್ಣ ಮಾಹಿತಿ ನೀಡುವುದು)</td>
<td><u>1. ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿ:</u><br>ಈ ಮಂಡಳಿಯಿಂದ ಕಳೆದ ಮೂರು ವರ್ಷಗಳಲ್ಲಿ ನೀಡಲಾದ ಅನುದಾನದ ವಿವರಗಳ ಮಾಹಿತಿಯನ್ನು <u>ಅನುಬಂಧ-02ರಲ್ಲಿ</u> ಒದಗಿಸಲಾಗಿದೆ.<br><br>2. ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿ:<br>ಈ ಮಂಡಳಿಯಿಂದ ಕಳೆದ ಮೂರು ವರ್ಷಗಳಲ್ಲಿ ಯಾದಗಿರಿ ಜಿಲ್ಲೆಯಲ್ಲಿ ನೋಂದಾಯಿತ ಫಲಾನುಭವಿಗಳಿಗೆ ಮಂಡಳಿಯಲ್ಲಿ ಸಂಗ್ರಹವಾದ ಸುಂಕದ ಮೊತ್ತದಿಂದ ವಿವಿಧ ಸೌಲಭ್ಯಗಳಡಿ ರೂ. 9,83,24,514.00 ಮೊತ್ತವನ್ನು ವಿತರಣೆ ಮಾಡಲಾಗಿರುತ್ತದೆ. ವರ್ಷವಾರು ವಿವರ ಈ ಕೆಳಕಂಡಂತಿದೆ:<br>
<table>
<tr><th>ಕ್ರಸಂ</th><th>ವರ್ಷ</th><th>ಮೊತ್ತ(ರೂ.ಗಳಲ್ಲಿ)</th></tr>
<tr><td>1</td><td>2018-19</td><td>5,41,88,514/-</td></tr>
<tr><td>2</td><td>2019-20</td><td>2,64,57,000/-</td></tr>
<tr><td>3</td><td>2020-21</td><td>1,76,79,000/-</td></tr>
</table>
</td>
</tr>
</table>

| ಇ) | ಕಾರ್ಮಿಕರ ಎಲ್ಲಾ ಸೌಲಭ್ಯಗಳನ್ನು ಪಡೆಯಲು ಇರುವ ಮಾನದಂಡಗಳೇನು; ಆ ಸಂಬಂಧದಲ್ಲಿ ಕಾರ್ಮಿಕರು ಅನುಸರಿಸಬೇಕಾದ ಕ್ರಮಗಳೇನು; (ಪೂರ್ಣ ಮಾಹಿತಿ ನೀಡುವುದು) | 1. **<u>ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿ:</u>**<br>**ಈ ಮಂಡಳಿಯು ಜಾರಿಗೊಳಿಸುತ್ತಿರುವ ಯೋಜನೆಗಳಡಿ ಸೌಲಭ್ಯಗಳನ್ನು ಪಡೆಯಲು ಇರುವ ಮಾನದಂಡಗಳು ಈ ಕೆಳಕಂಡಂತಿದೆ:**<br><br>**(1)ಕರ್ನಾಟಕ ರಾಜ್ಯ ಖಾಸಗಿ ವಾಣಿಜ್ಯ ಸಾರಿಗೆ ಕಾರ್ಮಿಕರ ಅಪಘಾತ ಪರಿಹಾರ ಯೋಜನೆ:-**<br>**<u>ಮಾನದಂಡ:-</u>**<br>• ಈ ಯೋಜನೆಯು ಕರ್ನಾಟಕ ರಾಜ್ಯಕ್ಕೆ ಮಾತ್ರ ಅನ್ವಯಿಸುತ್ತದೆ.<br>• ಯೋಜನೆಯು ಖಾಸಗಿ ವಾಣಿಜ್ಯ ಸಾರಿಗೆ ಕಾರ್ಮಿಕರಾದ ಚಾಲಕರು, ನಿರ್ವಾಹಕರು ಹಾಗೂ ಕ್ಲೀನರ್‌ಗಳಿಗೆ ಅನ್ವಯಿಸುತ್ತದೆ.<br>• ವಯೋಮಿತಿ 20 ರಿಂದ 70 ವರ್ಷಗಳು.<br>• ಯೋಜನೆಯ ಸೌಲಭ್ಯಗಳು ಕರ್ತವ್ಯದಲ್ಲಿರುವಾಗ ಹಾಗೂ ಇಲ್ಲದಿರುವಾಗಲೂ ಸಂಭವಿಸಿದ ಅಪಘಾತ ಪ್ರಕರಣಗಳಲ್ಲಿ ಸಹ ಲಭ್ಯವಾಗುತ್ತದೆ.<br>• ಚಾಲಕರು, ಕರ್ನಾಟಕ ರಾಜ್ಯ ಸಾರಿಗೆ ಇಲಾಖೆಯಿಂದ ವಾಣಿಜ್ಯ ವಾಹನ ಚಲಾಯಿಸಲು ಊರ್ಜಿತ ಚಾಲನಾ ಪರವಾನಗಿಯನ್ನು ಹೊಂದಿರಬೇಕು.<br><br>**ಅನುಸರಿಸಬೇಕಾದ ಕ್ರಮಗಳು:**<br>• ಪರಿಹಾರ ಮೊತ್ತವನ್ನು ಪಡೆಯಲು ಅಪಘಾತ ಸಂಭವಿಸಿದ ಒಂದು (1) ವರ್ಷದ ಒಳಗೆ ಮಂಡಳಿಗೆ ಫಲಾನುಭವಿ/ನಾಮನಿರ್ದೇಶಿತರು ನಿಗದಿತ ನಮೂನೆಯಲ್ಲಿ ಅರ್ಜಿ ಸಲ್ಲಿಸಬೇಕು.<br>• ಅಪಘಾತದಿಂದ ಮರಣ ಹೊಂದಿದ ಪ್ರಕರಣಗಳಲ್ಲಿ, ಫಲಾನುಭವಿಯ ನಾಮ ನಿರ್ದೇಶಿತರು ಕ್ಲೇಮ್ ಅರ್ಜಿಯ ಜೊತೆಗೆ ಮರಣ ಪ್ರಮಾಣ ಪತ್ರ, ಮರಣೋತ್ತರ ಪರೀಕ್ಷಾ ವರದಿ, ಪ್ರಥಮ ಮಾಹಿತಿ ವರದಿ(FIR) ಮತ್ತು ಊರ್ಜಿತ ಚಾಲನಾ ಪರವಾನಗಿಯನ್ನು ಲಗತ್ತಿಸಿ ಸಲ್ಲಿಸಬೇಕು.<br>• ಅಪಘಾತದಿಂದ ದುರ್ಬಲತೆ ಉಂಟಾದಲ್ಲಿ ಕ್ಲೇಮ್ ಅರ್ಜಿಯ ಜೊತೆಗೆ ಊರ್ಜಿತ ಚಾಲನಾ ಪರವಾನಗಿ/ಬ್ಯಾಡ್ಜ್, ಪ್ರಥಮ ಮಾಹಿತಿ ವರದಿ (FIR) ಮತ್ತು ಒಳರೋಗಿ ಆಸ್ಪತ್ರೆ ವೆಚ್ಚ ಹಿಂಪಡೆಯಲು ವೈದ್ಯಕೀಯ ಪ್ರಮಾಣ ಪತ್ರ/ಬಿಲ್‌ಗಳ ಮೂಲ ಪ್ರತಿಗಳನ್ನು ಕಡ್ಡಾಯವಾಗಿ ಲಗತ್ತಿಸಬೇಕು.<br>• ಸ್ವೀಕರಿಸಿದ ಕ್ಲೇಮ್ ಅರ್ಜಿಯ ದಾಖಲೆಗಳನ್ನು ಪರಿಶೀಲಿಸಿ ಅರ್ಹರಿದ್ದಲ್ಲಿ, ಪರಿಹಾರದ ಮೊತ್ತವನ್ನು ಅರ್ಜಿದಾರರ ಬ್ಯಾಂಕ್ ಖಾತೆಗೆ ನೇರವಾಗಿ ಜಮೆ ಮಾಡಲಾಗುವುದು. |
|---|---|---|

| | | |
|---|---|---|
| | | ➢ ಶೈಕ್ಷಣಿಕ ಧನಸಹಾಯ:–<br>ಮಾನದಂಡ:<br>• ಫಲಾನುಭವಿಯ ಪೋಷಕರು ಚಾಲಕರಾಗಿದ್ದು, ಅಪಘಾತದಿಂದ ಮರಣ ಅಥವಾ ಸಂಪೂರ್ಣ ಶಾಶ್ವತ ದುರ್ಬಲತೆ ಹೊಂದಿರಬೇಕು.<br>• 1 ರಿಂದ 12ನೇ ತರಗತಿಯವರೆಗೆ ವ್ಯಾಸಂಗ ಮಾಡುತ್ತಿರಬೇಕು.<br>ಅನುಸರಿಸಬೇಕಾದ ಕ್ರಮಗಳು:<br>• ಶೈಕ್ಷಣಿಕ ಧನ ಸಹಾಯದ ಅರ್ಜಿಗಳನ್ನು ಜಿಲ್ಲಾ ಕಾರ್ಮಿಕ ಅಧಿಕಾರಿಗಳ ಮುಖಾಂತರ ಅಥವಾ ನೇರವಾಗಿ ಮಂಡಳಿಗೆ ಸಲ್ಲಿಸಬಹುದು.<br>• ಸದರಿ ಅರ್ಜಿಗಳನ್ನು ಪರಿಶೀಲಿಸಿ ಧನ ಸಹಾಯದ ಮೊತ್ತವನ್ನು ಅರ್ಜಿದಾರರ ಬ್ಯಾಂಕ್ ಖಾತೆಗೆ ನೇರವಾಗಿ ಜಮೆ ಮಾಡಲಾಗುವುದು.<br>➢ <u>ಅಪಘಾತ ಜೀವ ರಕ್ಷಕ ಕಾರ್ಯಕ್ರಮ:</u><br>• ಚಾಲಕರು, ಕರ್ನಾಟಕ ರಾಜ್ಯ ಸಾರಿಗೆ ಇಲಾಖೆಯಿಂದ ವಾಣಿಜ್ಯ ವಾಹನ ಚಲಾಯಿಸಲು ಊರ್ಜಿತ ಚಾಲನಾ ಪರವಾನಗಿಯನ್ನು ಪಡೆದಿರಬೇಕು.<br>(2) <u>ಅಂಬೇಡ್ಕರ್ ಕಾರ್ಮಿಕ ಸಹಾಯ ಹಸ್ತ ಯೋಜನೆ:–</u><br><u>ಮಾನದಂಡ:–</u><br>• ಈ ಯೋಜನೆಯು ಕರ್ನಾಟಕ ರಾಜ್ಯಕ್ಕೆ ಮಾತ್ರ ಅನ್ವಯಿಸುತ್ತದೆ.<br>• ವಯೋಮಿತಿ 18 ರಿಂದ 60 ವರ್ಷಗಳು.<br>• ಪ್ರಸ್ತುತ ಮೇಲ್ಕಂಡ 11 ವರ್ಗಗಳ ಅಸಂಘಟಿತ ಕಾರ್ಮಿಕರಿಗೆ ಅನ್ವಯಿಸುತ್ತದೆ.<br>ಅನುಸರಿಸಬೇಕಾದ ಕ್ರಮಗಳು:<br>• ಮಂಡಳಿಯ www.ksuwssb.karnataka.gov.in ಪೋರ್ಟಲ್ ನಿಗದಿತ ಅರ್ಜಿ ನಮೂನೆಯಲ್ಲಿ ಈ ಕೆಳಕಂಡ ಅಗತ್ಯ ದಾಖಲೆಗಳೊಂದಿಗೆ ಮಾಹಿತಿಯನ್ನು ಆನ್‌ಲೈನ್‌ನಲ್ಲಿ ಭರ್ತಿ ಮಾಡುವುದು.<br>➢ ಪಾಸ್‌ಪೋರ್ಟ್ ಅಳತೆಯ ಇತ್ತೀಚಿನ ಭಾವಚಿತ್ರ (ಅಪ್‌ಲೋಡ್ ಮಾಡುವುದು).<br>➢ ವಯಸ್ಸಿನ ಪ್ರಮಾಣ ಪತ್ರ (ಶಾಲಾ ದಾಖಲೆ, ಜನನ ಪ್ರಮಾಣ ಪತ್ರ, ಚಾಲನಾ ಪರವಾನಿಗೆ, ಪಾಸ್‌ಪೋರ್ಟ್, ಜನ್ಮ ದಿನಾಂಕ ದಾಖಲಿಸಿದ ಆಧಾರ್ ಕಾರ್ಡ್, ಪ್ಯಾನ್ ಕಾರ್ಡ್ ಅಥವಾ ನೋಂದಾಯಿತ ಎಂ.ಬಿ.ಬಿ.ಎಸ್. ವೈದ್ಯರಿಂದ ವಯಸ್ಸಿನ ಪ್ರಮಾಣ ಪತ್ರ ಇವುಗಳಲ್ಲಿ ಯಾವುದಾದರೊಂದು ಪ್ರತಿಯನ್ನು ಅಪ್‌ಲೋಡ್ ಮಾಡುವುದು). |

➢ ಆಧಾರ್ ಕಾರ್ಡ್ (ಪ್ರತಿಯನ್ನು ಅಪ್‌ಲೋಡ್ ಮಾಡುವುದು).

➢ ಚಾಲ್ತಿಯಲ್ಲಿರುವ ಮೊಬೈಲ್ ಸಂಖ್ಯೆ.

➢ ಬ್ಯಾಂಕ್ ಖಾತೆ ಸಂಖ್ಯೆ, ಬ್ಯಾಂಕ್‌ನ ಹೆಸರು ಹಾಗೂ ಶಾಖೆ ವಿಳಾಸ, ಐ.ಎಫ್.ಎಸ್.ಸಿ. ಕೋಡ್ ವಿವರಗಳು ಹಾಗೂ ಬ್ಯಾಂಕ್ ಪಾಸ್ ಪುಸ್ತಕದ ವಿವರ ಪುಟವನ್ನು ಅಪ್‌ಲೋಡ್ ಮಾಡುವುದು.

➢ ನೋಂದಣಿ ಶುಲ್ಕ ರೂ.25/-ಗಳನ್ನು ಆನ್‌ಲೈನ್ (Net Banking, Credit & Dedit Card,UPI) ಮೂಲಕ ಪಾವತಿಸುವುದು.

➢ ಅರ್ಜಿಯನ್ನು ಭರ್ತಿ ಮಾಡಲು ಹಾಗೂ ಸ್ಮಾರ್ಟ್ ಕಾರ್ಡ್ ಪಡೆಯಲು ಕಾರ್ಮಿಕ ಸೇವಾ ಕೇಂದ್ರದಲ್ಲಿರುವ ಕಾರ್ಮಿಕ ಬಂಧುಗಳ ಸಹಾಯ ಪಡೆಯಬಹುದು.

(3) ಅ) <u>ಪ್ರಧಾನ ಮಂತ್ರಿ ಶ್ರಮ್ ಯೋಗಿ ಮಾನ್-ಧನ್ ಯೋಜನೆ (ಪಿಎಂ-ಎಸ್‌ವೈಎಂ):-</u>

<u>ಮಾನದಂಡ:</u>

- ಅಸಂಘಟಿತ ವಲಯದ ಕಾರ್ಮಿಕರಾಗಿದ್ದು 18-40 ವರ್ಷದೊಳಗಿರಬೇಕು.
- ಮಾಸಿಕ ಆದಾಯ ರೂ. 15,000/- ಕ್ಕಿಂತ ಕಡಿಮೆಯಿರಬೇಕು.
- ಆದಾಯ ತೆರಿಗೆ/ಇಎಸ್‌ಐ/ ಇಪಿಎಫ್‌ಓ/ ನ್ಯಾಷನಲ್ ಪೆನ್‌ಷನ್ ಸ್ಕೀಮ್ ವ್ಯಾಪ್ತಿಗೆ ಒಳಪಟ್ಟಿರಬಾರದು.

ಆ) <u>ನ್ಯೂ ಪೆನ್ಷನ್ ಸ್ಕೀಮ್ ಫಾರ್ ಟ್ರೇಡರ್ಸ್ ಅಂಡ್ ಸೆಲ್ಫ್ ಎಂಪ್ಲಾಯ್ಡ್ ಪರ್ಸನ್ಸ್:-</u>

ಅಂಗಡಿ ಮಾಲೀಕರು, ಚಿಲ್ಲರೆ ವ್ಯಾಪಾರಿಗಳು, ಅಕ್ಕಿ ಗಿರಣಿ ಮಾಲೀಕರು, ಎಣ್ಣೆ ಗಿರಣಿ ಮಾಲೀಕರು, ವರ್ಕ್‌ಶಾಪ್ ಮಾಲೀಕರು, ಕಮಿಷನ್ ಏಜೆಂಟ್ಸ್, ರಿಯಲ್ ಎಸ್ಟೇಟ್‌ನ ಬ್ರೋಕರ್ಸ್, ಸಣ್ಣ ಹೋಟೆಲ್ ಹಾಗೂ ರೆಸ್ಟೋರೆಂಟ್‌ನ ಮಾಲೀಕರು ಹಾಗೂ ಅಂತಹ ಇತರೆ ಸಣ್ಣ ವ್ಯಾಪಾರಗಳಲ್ಲಿ ತೊಡಗಿಸಿಕೊಂಡ ವ್ಯಾಪಾರಿಗಳು/ಲಘು ವ್ಯಾಪಾರಿಗಳು ಹಾಗೂ ಸ್ವಯಂ ಉದ್ಯೋಗಿಗಳು 60 ವರ್ಷ ಪೂರೈಸಿದ ನಂತರ ಮಾಸಿಕ ನಿಶ್ಚಿತ ರೂ.3000/-ಗಳ ಪಿಂಚಣಿ ಸೌಲಭ್ಯ ಒದಗಿಸುವ ಕೇಂದ್ರ ಸರ್ಕಾರದ ಈ ಯೋಜನೆಯಡಿ ನೋಂದಾಯಿಸಲು ಮಾನದಂಡಗಳು ಈ ಕೆಳಗಿನಂತಿವೆ:

- 18ರಿಂದ 40 ವರ್ಷದವರಾಗಿರಬೇಕು.
- ವಾರ್ಷಿಕ ವಹಿವಾಟು ಗರಿಷ್ಠ ರೂ. 1.50 ಕೋಟಿಗಳ ಒಳಗಿರಬೇಕು
- ಆದಾಯ ತೆರಿಗೆ ಪಾವತಿಸುವವರಾಗಿರಬಾರದು. ಇ.ಎಸ್.ಐ/ ಇ.ಪಿ.ಎಫ್/ ಎನ್.ಪಿ.ಎಸ್/ ಪಿಎಂಎಸ್‌ವೈಎಂ/ ಪಿ.ಎಂ.ಕೆ.ಎಂ.ವೈ.ಯೋಜನೆಯ ಫಲಾನುಭವಿಗಳಾಗಿರಬಾರದು.

ಅನುಸರಿಸಬೇಕಾದ ಕ್ರಮಗಳು:

- ಅರ್ಹ ಫಲಾನುಭವಿಗಳು ಹತ್ತಿರದ "ಕಾಮನ್ ಸರ್ವಿಸ್ ಸೆಂಟರ್

| | | |
|---|---|---|
| | | ಬಗ್ಗೆ ತಿಳಿಸುವ ಸಲುವಾಗಿ ಕಾರ್ಮಿಕ ಇಲಾಖೆಯ ಅಧಿಕಾರಿಗಳಿಗೆ ಜಿಲ್ಲಾಮಟ್ಟದಲ್ಲಿ ತರಬೇತಿ ಕಾರ್ಯಕ್ರಮವನ್ನು ಏರ್ಪಡಿಸಲಾಗಿದ್ದು, ಈ ಮೂಲಕ ಅಧಿಕಾರಿಗಳು ತಮ್ಮ ವ್ಯಾಪ್ತಿಯಲ್ಲಿ ಬರುವ ಕಾರ್ಮಿಕರಿಗೆ ಅರಿವು ಮೂಡಿಸಲು ನೆರವಾಗುವಂತೆ ಕ್ರಮ ಕೈಗೊಳ್ಳಲಾಗಿದೆ.<br>➢ ಕಾರ್ಮಿಕ ಇಲಾಖೆ ಹಾಗೂ ಅದರ ಅಧೀನದಲ್ಲಿ ಬರುವ ಮಂಡಳಿ ಹಾಗೂ ಸೊಸೈಟಿಗಳು ಜಾರಿಗೊಳಿಸುತ್ತಿರುವ ಯೋಜನೆಗಳ ಬಗ್ಗೆ ಮಾಹಿತಿ ನೀಡಲು ಕಾರ್ಮಿಕ ಸಹಾಯವಾಣಿ 155214 ಅನ್ನು ತೆರೆಯಲಾಗಿದೆ.<br>➢ ಕಾರ್ಮಿಕ ಇಲಾಖೆ ಹಾಗೂ ಇಲಾಖೆಯ ಅಧೀನದಲ್ಲಿ ಕಾರ್ಯನಿರ್ವಹಿಸುತ್ತಿರುವ ಮಂಡಳಿ/ ಸೊಸೈಟಿಗಳು ಜಾರಿಗೊಳಿಸುತ್ತಿರುವ ಯೋಜನೆಗಳಡಿ ದೊರೆಯುವ ಸೌಲಭ್ಯಗಳ ಕುರಿತು ಮಾಹಿತಿ ನೀಡಲು, ಸೌಲಭ್ಯಗಳನ್ನು ಪಡೆಯಲು, ಅವಶ್ಯಕ ದಾಖಲೆಗಳನ್ನು ಸಂಗ್ರಹಿಸಲು ಮತ್ತು ಸಂಬಂಧಪಟ್ಟವರಿಗೆ ತಲುಪಿಸಿ ಸೌಲಭ್ಯಗಳನ್ನು ಪಡೆಯಲು ಅನುಕೂಲವಾಗುವಂತೆ ರಾಜ್ಯದ ಬಹತೇಕ ಎಲ್ಲಾ ತಾಲ್ಲೂಕು ಕೇಂದ್ರಗಳಲ್ಲಿ ಕಾರ್ಮಿಕ ಸೇವಾ ಕೇಂದ್ರಗಳನ್ನು ತೆರೆಯಲಾಗಿದೆ. ಸದರಿ ಕೇಂದ್ರಗಳಲ್ಲಿ ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿಯಿಂದ ನೇಮಕಗೊಂಡ ಕಾರ್ಮಿಕ ಬಂಧುಗಳು ಎಲ್ಲಾ ರೀತಿಯ ಸಹಾಯ ಒದಗಿಸುತ್ತಾರೆ.<br>2. <u>ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿ:</u><br>ಈ ಮಂಡಳಿಯು ರೂಪಿಸಿರುವ ಯೋಜನೆಗಳು ಸಮರ್ಪಕವಾಗಿ ನೋಂದಾಯಿತ ಫಲಾನುಭವಿಗಳಿಗೆ ಮತ್ತು ಅವರ ಅವಲಂಭಿತರಿಗಾಗಿ ತಲುಪಿಸುವ ಉದ್ದೇಶದಿಂದ ಈ ಕೆಳಕಂಡ ಮಾಹಿತಿ, ಶಿಕ್ಷಣ ಮತ್ತು ಸಂವಹನ ಕಾರ್ಯಕ್ರಮಗಳನ್ನು ಮಂಡಳಿಯ ವತಿಯಿಂದ ಹಮ್ಮಿಕೊಳ್ಳಲಾಗಿದೆ.<br>• KSRTC/ NEKRTC/ NWKRTC Bus Branding ಜಾಹೀರಾತಿನ ಮೂಲಕ ಪ್ರಚಾರ ಪಡಿಸಲಾಗಿದೆ.<br>• ರಾಜ್ಯ ರಸ್ತೆ ಸಾರಿಗೆ ಸಂಸ್ಥೆಯ ಬಸ್ ನಿಲ್ದಾಣಗಳಲ್ಲಿ ಒಂದು ತಿಂಗಳ ಅವಧಿಗೆ ಶ್ರಾವ್ಯ ಮಾಧ್ಯಮದ ಮೂಲಕ ಪ್ರಚಾರ ಮಾಡಲಾಗಿದೆ.<br>• ಮಂಡಳಿಯ ವತಿಯಿಂದ ಕಟ್ಟಡ ಹಾಗೂ ಇತರೆ ನಿರ್ಮಾಣ ಕಾರ್ಮಿಕರಿಗೆ ಮಂಡಳಿಯ ವತಿಯಿಂದ ಒದಗಿಸಲಾಗುತ್ತಿರುವ ಸೌಲಭ್ಯಗಳ ವಿವರಗಳ ಬಗ್ಗೆ Hoarding ಗಳನ್ನು ಮುದ್ರಿಸಿ ರಾಜ್ಯಾದ್ಯಂತ ಅಳವಡಿಸಲಾಗಿದೆ.<br>• ಮಂಡಳಿಯ ವತಿಯಿಂದ ಕಟ್ಟಡ ಹಾಗೂ ಇತರೆ ನಿರ್ಮಾಣ ಕಾರ್ಮಿಕರಿಗೆ ಮಂಡಳಿಯ ವತಿಯಿಂದ ಒದಗಿಸಲಾಗುತ್ತಿರುವ |

| | | |
|---|---|---|
| | | (ಸಿ.ಎಸ್.ಸಿ)" ಗಳಲ್ಲಿ ಯೋಜನೆಯಡಿ ನೋಂದಾಯಿಸಬಹುದಾಗಿರುತ್ತದೆ. ಸಿ.ಎಸ್.ಸಿ.ಗಳ ವಿವರಗಳನ್ನು ಹತ್ತಿರದ ಎಲ್.ಐ.ಸಿ. ಶಾಖೆಗಳು, ಕಾರ್ಮಿಕ ಇಲಾಖೆ, ಕೇಂದ್ರ ಸರ್ಕಾರದ ಕಾರ್ಮಿಕ ಇಲಾಖೆ, ಇ.ಎಸ್.ಐ. ಕಾರ್ಪೋರೇಷನ್, ಹಾಗೂ ಭವಿಷ್ಯನಿಧಿ ಇಲಾಖೆ ಹಾಗೂ ಅವರ ವೆಬ್ ವಿಳಾಸಗಳು ಹಾಗೂ ವೆಬ್ ವಿಳಾಸ http://locator.csccloud.in ಗಳಲ್ಲಿ ಪಡೆಯಬಹುದಾಗಿರುತ್ತದೆ.<br>• ಫಲಾನುಭವಿಗಳು ತಮ್ಮೊಂದಿಗೆ ಆರಂಭಿಕ ವಂತಿಕೆ ಮೊತ್ತ, ಆಧಾರ್ ಕಾರ್ಡ್, ಬ್ಯಾಂಕ್ ಖಾತೆ ಐ.ಎಫ್.ಎಸ್.ಸಿ ಕೋಡ್ ವಿವರಗಳೊಂದಿಗೆ (ಬ್ಯಾಂಕ್ ಪಾಸ್ ಪುಸ್ತಕ/ಚೆಕ್ ಪುಸ್ತಕ/ಬ್ಯಾಂಕ್ ಸ್ಟೇಟ್‌ಮೆಂಟ್) ತಮ್ಮ ನಾಮನಿರ್ದೇಶಿತರ ವಿವರಗಳು ಮತ್ತು ಮೊಬೈಲ್‌ನೊಂದಿಗೆ ಕಾಮನ್ ಸರ್ವಿಸ್ ಸೆಂಟರ್‌ಗಳಿಗೆ ತೆರಳುವುದು.<br>• ಅನುಬಂಧದಲ್ಲಿ ತಿಳಿಸಿರುವಂತೆ ವಯಸ್ಸಿಗೆ ಅನುಗುಣವಾಗಿ ಆರಂಬಿಕ ವಂತಿಗೆಯನ್ನು ನಗದು ರೂಪದಲ್ಲಿ ಪಾವತಿಸುವುದು ಹಾಗೂ ತದನಂತರ ಮಾಸಿಕ ವಂತಿಕೆಯನ್ನು ಅವರ ಖಾತೆಯಿಂದ ಆಟೋ–ಡೆಬಿಟ್ ಮೂಲಕ ಕಟಾವು ಮಾಡಿಕೊಳ್ಳಲಾಗುತ್ತದೆ.<br>2. **ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿ:**<br>ಈ ಮಂಡಳಿಯು ರೂಪಿಸಿರುವ ಸೌಲಭ್ಯಗಳನ್ನು ಪಡೆಯಲು ಇರುವ ಮಾನದಂಡಗಳು ಮತ್ತು ಅನುಸರಿಸಬೇಕಾದ ಕ್ರಮಗಳನ್ನು **ಅನುಬಂಧ–03** ರಲ್ಲಿ ಲಗತ್ತಿಸಿದೆ. |
| ಈ) | ಮಾಹಿತಿ ಕೊರತೆಯಿಂದ ಈ ಸೌಲಭ್ಯಗಳು ಕಾರ್ಮಿಕ ವರ್ಗದವರಿಗೆ ದೊರೆಯದೆ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಈ ಮಂಡಳಿಗಳು ಜಾರಿಗೊಳಿಸುತ್ತಿರುವ ಯೋಜನೆಗಳ ಕುರಿತು ಫಲಾನುಭವಿಗಳಲ್ಲಿ ಅರಿವು ಮೂಡಿಸಲು ಎಲ್ಲಾ ರೀತಿಯ ಸಂವಹನ ಚಟುವಟಿಕೆಗಳನ್ನು ಕೈಗೊಂಡರೂ ಸಹ ಸ್ವಲ್ಪ ಮಟ್ಟಿಗೆ ಮಾಹಿತಿಯ ಕೊರತೆ ಉಂಟಾಗಿರುವುದು ಮಂಡಳಿಗಳ ಗಮನಕ್ಕೆ ಬಂದಿದೆ. |
| ಉ) | ಬಂದಿದ್ದಲ್ಲಿ, ಈ ನಿಟ್ಟಿನಲ್ಲಿ ಸರ್ಕಾರ ಕೈಗೊಂಡ ಕ್ರಮಗಳೇನು; (ಪೂರ್ಣ ಮಾಹಿತಿ ನೀಡುವುದು) | 1. **ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿ:**<br>ಅಸಂಘಟಿತ ಕಾರ್ಮಿಕರಲ್ಲಿ ಈ ಮಂಡಳಿಯು ಜಾರಿಗೊಳಿಸುತ್ತಿರುವ ಯೋಜನೆಗಳ ಅರಿವು ಮೂಡಿಸುವ ಸಲುವಾಗಿ ಈ ಕೆಳಕಂಡ ಕ್ರಮಗಳನ್ನು ಕೈಗೊಳ್ಳಲಾಗಿದೆ:<br>➢ ಕರಪತ್ರ, ದಿನ ಪತ್ರಿಕೆ, ಬ್ಯಾನರ್ಸ್, ಹಾಗೂ ಹೋರ್ಡಿಂಗ್ಸ್‌ಗಳ ಮೂಲಕ ಪ್ರಚಾರ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗುತ್ತಿದೆ.<br>➢ ಕಾರ್ಮಿಕ ಇಲಾಖೆ ಹಾಗೂ ಅದರ ಅಧೀನದಲ್ಲಿ ಬರುವ ಮಂಡಳಿ/ಸೊಸೈಟಿಗಳು ಜಾರಿಗೊಳಿಸುತ್ತಿರುವ ಯೋಜನೆಗಳ ಕುರಿತಂತೆ ಕರ್ನಾಟಕ ಕಾನೂನು ಸೇವಾ ಪ್ರಾಧಿಕಾರದ ಜೊತೆಗೂಡಿ ಸಾರ್ವಜನಿಕರಲ್ಲಿ ಅರಿವು ಮೂಡಿಸಲಾಗುತ್ತಿದೆ.<br>➢ ಮಂಡಳಿ/ ಸೊಸೈಟಿಗಳು ಜಾರಿಗೊಳಿಸುತ್ತಿರುವ ಯೋಜನೆಗಳ ಬಗ್ಗೆ ಮಾಹಿತಿ ಹಾಗೂ ನೋಂದಣಿ ಪ್ರಕ್ರಿಯೆಗಳ ವಿಧಾನಗಳ |

| | | |
|---|---|---|
| | | ಸೌಲಭ್ಯಗಳನ್ನೊಳಗೊಂಡ Banners ಗಳನ್ನು ಮುದ್ರಿಸಿಪ್ರತಿ ತಾಲ್ಲೂಕಿಗೆ 8 ರಂತೆ (ಒಟ್ಟು 1920) ಎಲ್ಲಾ ತಾಲ್ಲೂಕು ಕಾರ್ಮಿಕ ಕಛೇರಿಗಳಿಗೆ ಸರಬರಾಜು ಮಾಡಲಾಗಿರುತ್ತದೆ.<br>• Digital Wall Painting ಮೂಲಕ ನಿರ್ಮಾಣ ಕಾರ್ಮಿಕರಿಗೆ ಮಂಡಳಿಯ ವತಿಯಿಂದ ಒದಗಿಸಲಾಗುತ್ತಿರುವ ಸೌಲಭ್ಯಗಳನ್ನು ಪ್ರಾದೇಶಿಕ ಮಟ್ಟದಲ್ಲಿ ಪ್ರಚಾರ ಪಡಿಸಲು ಕ್ರಮ ಕೈಗೊಳ್ಳಲಾಗುತ್ತಿದೆ.<br>• BMTC ಬಸ್ ನಿಲ್ದಾಣಗಳಲ್ಲಿ 30 ಸೆಕೆಂಡ್ ಅವಧಿಯ ವೀಡಿಯೋ ಸ್ಪಾಟ್‌ಗಳಲ್ಲಿ ನಿರ್ಮಾಣ ಕಾರ್ಮಿಕರಿಗೆ ಮಂಡಳಿಯ ವತಿಯಿಂದ ಒದಗಿಸಲಾಗುತ್ತಿರುವ ಸೌಲಭ್ಯಗಳನ್ನು ಪ್ರಚಾರ ಪಡಿಸಲಾಗಿರುತ್ತದೆ.<br>• ಮಂಡಳಿಯ ವತಿಯಿಂದ ಕಟ್ಟಡ ಹಾಗೂ ಇತರೆ ನಿರ್ಮಾಣ ಕಾರ್ಮಿಕರಿಗೆ ಮಂಡಳಿಯ ವತಿಯಿಂದ ಒದಗಿಸಲಾಗುತ್ತಿರುವ ಸೌಲಭ್ಯಗಳನ್ನೊಳಗೊಂಡ Pamphletsಗಳನ್ನು ಮುದ್ರಿಸಿ ಪ್ರತಿ ತಾಲ್ಲೂಕಿಗೆ 1000 ದಂತೆ (ಒಟ್ಟು 2,40,000) ತಾಲ್ಲೂಕು ಕಾರ್ಮಿಕ ಕಛೇರಿಗಳಿಗೆ ಸರಬರಾಜು ಮಾಡಲಾಗಿರುತ್ತದೆ.<br>• ಕಟ್ಟಡ ಹಾಗೂ ಇತರೆ ನಿರ್ಮಾಣ ಕಾರ್ಮಿಕರಿಗೆ ಮಂಡಳಿಯ ವತಿಯಿಂದ ಒದಗಿಸಲಾಗುತ್ತಿರುವ ಸೌಲಭ್ಯಗಳನ್ನೊಳಗೊಂಡ Calendar ಗಳನ್ನು ಇಲಾಖೆಯ ಅಧಿಕಾರಿಗಳಿಗೆ ಸರಬರಾಜು ಮಾಡಲಾಗಿರುತ್ತದೆ.<br>• ರಾಜ್ಯದ ವಿವಿಧ ಕನ್ನಡ ದಿನ ಪತ್ರಿಕೆಗಳು ಮತ್ತು ಪತ್ರಿಕೆಗಳ ವಿಶೇಷಾಂಕಗಳಲ್ಲಿ ಮಂಡಳಿಯ ಯೋಜನೆಗಳು ಹಾಗೂ ಸೌಲಭ್ಯಗಳ ಕುರಿತು ಮಾಹಿತಿ ಪ್ರಕಟಿಸಲಾಗಿದೆ.<br>ಮಂಡಳಿಯ ವತಿಯಿಂದ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರಿಗೆ ಒದಗಿಸಲಾಗುತ್ತಿರುವ ಸೌಲಭ್ಯಗಳನ್ನೊಳಗೊಂಡ ಸಾಕ್ಷ್ಯ ಚಿತ್ರ ಮತ್ತು ಕಿರು ಚಿತ್ರಗಳನ್ನು ಚಿತ್ರಿಸಲು ಕ್ರಮ ಕೈಗೊಳ್ಳಲಾಗುತ್ತಿದೆ. |
| ಊ) | ಜಿಲ್ಲಾ ಕಾರ್ಮಿಕ ಅಧಿಕಾರಿಗಳು ಮತ್ತು ಕಾರ್ಮಿಕ ನಿರೀಕ್ಷಕರು ಈ ಕಾರ್ಮಿಕ ಕಾರ್ಯಕ್ರಮಗಳ ಬಗ್ಗೆ ಸ್ಥಳೀಯ ಜನ ಪ್ರತಿನಿಧಿಗಳ ಜೊತೆ ಚರ್ಚೆ ನಡೆಸಿ ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಅಧಿಕಾರಿಗಳಿಗೆ ನಿರ್ದೇಶನವನ್ನು ನೀಡಲಾಗಿದೆಯೇ; | ಕಾರ್ಮಿಕ ಇಲಾಖೆಯಿಂದ ನಡೆಸುವ ಪ್ರಗತಿ ಪರಿಶೀಲನಾ ಸಭೆಯಲ್ಲಿ ಮಂಡಳಿಗಳು ಜಾರಿಗೊಳಿಸುತ್ತಿರುವ ಯೋಜನೆಗಳನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸುವ ನಿಟ್ಟಿನಲ್ಲಿ, ಎಲ್ಲಾ ಜಿಲ್ಲಾ ಕಾರ್ಮಿಕ ಅಧಿಕಾರಿಗಳು ಮತ್ತು ಕಾರ್ಮಿಕ ನಿರೀಕ್ಷಕರು, ಸ್ಥಳೀಯ ಜನಪ್ರತಿನಿಧಿಗಳ ಸಹಯೋಗದೊಂದಿಗೆ ಕಾರ್ಯನಿರ್ವಹಿಸುವಂತೆ ನಿರ್ದೇಶನ ನೀಡಲಾಗಿದೆ. |
| ಋ) | ಇಲ್ಲದಿದ್ದಲ್ಲಿ, ಕಾರಣವೇನು? | ಉದ್ಭವಿಸುವುದಿಲ್ಲ. |

**ಕಾಇ 140 ಎಲ್‌ಇಟಿ 2021**

(ಅರಬೈಲ್ ಶಿವರಾಂ ಹೆಬ್ಬಾರ್)
ಕಾರ್ಮಿಕ ಸಚಿವರು

# ಅನುಬಂಧ-01

(ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 3822)

## ಕನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿವತಿಯಿಂದ ಫಲಾನುಭವಿಗಳಿಗೆ ಸಿಗುವ ಸೌಲಭ್ಯಗಳು

1. ಪಿಂಚಣಿ ಸೌಲಭ್ಯ: ಮೂರು ವರ್ಷ ಸದಸ್ಯತ್ವದೊಂದಿಗೆ 60 ವರ್ಷ ಪೂರೈಸಿದ ಫಲಾನುಭವಿಗೆ ಮಾಸಿಕ ರೂ.2,000/-
2. ಕುಟುಂಬ ಪಿಂಚಣಿ ಸೌಲಭ್ಯ: ಮೃತ ಪಿಂಚಣಿದಾರರ ಪತಿ / ಪತ್ನಿ ಮಾಸಿಕ ರೂ.1000/-
3. ದುರ್ಬಲತೆ ಪಿಂಚಣಿ: ನೋಂದಾಯಿತ ಫಲಾನುಭವಿಯು ಖಾಯಿಲೆಗಳಿಂದ ಅಥವಾ ಕಟ್ಟಡ ಕಾಮಗಾರಿಗಳ ಅಪಘಾತದಿಂದ ಶಾಶ್ವತ/ಭಾಗಶಃ ಅಂಗವಿಕಲತೆ ಹೊಂದಿದ್ದರೆ ಮಾಸಿಕ ರೂ.2,000/- ಪಿಂಚಣಿ ಹಾಗೂ ಶೇಕಡವಾರು ದುರ್ಬಲತೆಯನ್ನಾಧರಿಸಿ ರೂ.2,00,000/- ದವರೆಗೆ ಅನುಗ್ರಹ ರಾಶಿ ಸಹಾಯಧನ.
4. ಕನ್ನಡಕ, ಶ್ರವಣಯಂತ್ರ, ಕೃತಕ ಕೈಕಾಲು ಮತ್ತು ಗಾಲಿ ಕುರ್ಚಿ ಮರುಪಾವತಿ ಸೌಲಭ್ಯ.
5. ಟ್ರೈನಿಂಗ್-ಕಮ್-ಟೂಲ್‌ಕಿಟ್‌ಸೌಲಭ್ಯ (ಶ್ರಮ ಸಾಮರ್ಥ್ಯ) : ರೂ.30,000/- ವರೆಗೆ
6. ಶ್ರಮ ಸಂಸಾರ ಸಾಮರ್ಥ್ಯ ತರಬೇತಿ ಸೌಲಭ್ಯ: ನೋಂದಾಯಿತ ಫಲಾನುಭವಿಯ ಅವಲಂಭಿತರಿಗೆ
7. ವಸತಿ ಸೌಲಭ್ಯ (ಕಾರ್ಮಿಕ ಗೃಹ ಭಾಗ್ಯ): ರೂ.2,00,000/- ದವರೆಗೆ ಮುಂಗಡ ಸೌಲಭ್ಯ
8. ಹೆರಿಗೆ ಸೌಲಭ್ಯ (ತಾಯಿ ಲಕ್ಷ್ಮೀ ಬಾಂಡ್): ಮಹಿಳಾ ಫಲಾನುಭವಿಯ ಮೊದಲ ಎರಡು ಮಕ್ಕಳಿಗೆ ಹೆಣ್ಣು ಮಗುವಿನ ಜನನಕ್ಕೆ ರೂ. 30,000/- ಮತ್ತು ಗಂಡು ಮಗುವಿನ ಜನನಕ್ಕೆ ರೂ.20,000/-
9. ಶಿಶು ಪಾಲನಾ ಸೌಲಭ್ಯ:
10. ಅಂತ್ಯಕ್ರಿಯೆ ವೆಚ್ಚ : ರೂ.4,000/- ಹಾಗೂ ಅನುಗ್ರಹ ರಾಶಿ ರೂ.50,000/-ಸಹಾಯಧನ
11. ಶೈಕ್ಷಣಿಕ ಸಹಾಯಧನ (ಕಲಿಕೆ ಭಾಗ್ಯ): ಫಲಾನುಭವಿಯ ಇಬ್ಬರು ಮಕ್ಕಳ ವಿದ್ಯಾಭ್ಯಾಸಕ್ಕಾಗಿ:

| ಕ್ರಸಂ | ತರಗತಿ (ಉತ್ತೀರ್ಣಕ್ಕೆ) | ವಾರ್ಷಿಕ ಸಹಾಯ ಧನ | |
|---|---|---|---|
| | | ಗಂಡು | ಹೆಣ್ಣು |
| I. | ನರ್ಸರಿ | 3,000 | 4,000 |
| II. | 1 ರಿಂದ 4ನೇ ತರಗತಿ | 3,000 | 4,000 |
| III. | 5 ರಿಂದ 8ನೇ ತರಗತಿ | 5,000 | 6,000 |
| IV. | 9 ಹಾಗೂ 10ನೇ ತರಗತಿ | 10,000 | 11,000 |
| V. | ಪ್ರಥಮ ಪಿಯುಸಿ ಮತ್ತು ದ್ವಿತೀಯ ಪಿ.ಯು.ಸಿ | 10,000 | 14,000 |
| VI. | ಐಟಿಐ | 12,000 | 15,000 |
| VII. | ಪದವಿ ಪ್ರತಿ ವರ್ಷಕ್ಕೆ | 15,000 | 20,000 |
| VIII. | ಸ್ನಾತಕೋತ್ತರ ಪದವಿ ಸೇರ್ಪಡೆಗೆ | 20,000 | 20,000 |
| | ಮತ್ತು ಪ್ರತಿ ವರ್ಷಕ್ಕೆ | 20,000 | 25,000 |
| IX. | ಇಂಜಿನಿಯರಿಂಗ್ ಕೋರ್ಸ್ ಬಿಇ/ ಬಿ.ಟೆಕ್ ಸೇರ್ಪಡೆಗೆ | 25,000 | 25,000 |
| | ಮತ್ತು ಪ್ರತಿ ವರ್ಷಕ್ಕೆ | 25,000 | 30,000 |

| | | | |
|---|---|---|---|
| X. | ವೈದ್ಯಕೀಯ ಕೋರ್ಸ್‌ಗೆ ಸೇರ್ಪಡೆಗೆ | 30,000 | 30,000 |
| | ಮತ್ತು ಪ್ರತಿ ವರ್ಷಕ್ಕೆ | 40,000 | 50,000 |
| XI. | ಡಿಪ್ಲೋಮಾ | 15,000 | 20,000 |
| XII. | ಎಂ.ಟೆಕ್ / ಎಂ.ಇ | 30,000 | 35,000 |
| XIII. | ಎಂ.ಡಿ (ವೈದ್ಯಕೀಯ) | 45,000 | 55,000 |
| XIV. | ಪಿಹೆಚ್‌ಡಿ (ಪ್ರತಿ ವರ್ಷಕ್ಕೆ) ಗರಿಷ್ಠ 03 ವರ್ಷ | 25,000 | 30,000 |

12. **ವೈದ್ಯಕೀಯ ಸಹಾಯಧನ (ಕಾರ್ಮಿಕ ಆರೋಗ್ಯ ಭಾಗ್ಯ):** ನೋಂದಾಯಿತ ಫಲಾನುಭವಿ ಹಾಗೂ ಅವರ ಅವಲಂಭಿತರಿಗೆ **ರೂ.300/-** ರಿಂದ **ರೂ.10,000/-**ವರೆಗೆ
13. **ಅಪಘಾತ ಪರಿಹಾರ:** ಮರಣ ಹೊಂದಿದ್ದಲ್ಲಿ **ರೂ.5,00,000/-,** ಸಂಪೂರ್ಣ ಶಾಶ್ವತ ದುರ್ಬಲತೆಯಾದಲ್ಲಿ **ರೂ.2,00,000/- ಮತ್ತು** ಭಾಗಶಃ ಶಾಶ್ವತ ದುರ್ಬಲತೆಯಾದಲ್ಲಿ **ರೂ.1,00,000/-**
14. **ಪ್ರಮುಖ ವೈದ್ಯಕೀಯ ವೆಚ್ಚ ಸಹಾಯಧನ (ಕಾರ್ಮಿಕ ಚಿಕಿತ್ಸಾ ಭಾಗ್ಯ):** ಹೃದ್ರೋಗ, ಕಿಡ್ನಿ ಜೋಡಣೆ, ಕ್ಯಾನ್ಸರ್ ಶಸ್ತ್ರಚಿಕಿತ್ಸೆ, ಕಣ್ಣಿನ ಶಸ್ತ್ರಚಿಕಿತ್ಸೆ, ಪಾರ್ಶ್ವವಾಯು, ಮೂಳೆ ಶಸ್ತ್ರಚಿಕಿತ್ಸೆ, ಗರ್ಭಕೋಶ ಶಸ್ತ್ರಚಿಕಿತ್ಸೆ, ಅಸ್ತಮ ಚಿಕಿತ್ಸೆ, ಗರ್ಭಪಾತ ಪ್ರಕರಣಗಳು, ಪಿತ್ತಕೋಶದ ತೊಂದರೆಗೆ ಸಂಬಂಧಿತ ಚಿಕಿತ್ಸೆ, ಮೂತ್ರ ಪಿಂಡದಲ್ಲಿನ ಕಲ್ಲು ತೆಗೆಯುವ ಚಿಕಿತ್ಸೆ, ಮೆದುಳಿನ ರಕ್ತಸ್ರಾವದ ಚಿಕಿತ್ಸೆ, ಅಲ್ಸರ್ ಚಿಕಿತ್ಸೆ, ಡಯಾಲಿಸಿಸ್ ಚಿಕಿತ್ಸೆ, ಕಿಡ್ನಿ ಶಸ್ತ್ರಚಿಕಿತ್ಸೆ, ಇ.ಎನ್.ಟಿ. ಚಿಕಿತ್ಸೆ ಮತ್ತು ಶಸ್ತ್ರಚಿಕಿತ್ಸೆ, ನರರೋಗ ಶಸ್ತ್ರಚಿಕಿತ್ಸೆ, ವ್ಯಾಸ್ಕ್ಯೂಲರ್ ಶಸ್ತ್ರಚಿಕಿತ್ಸೆ, ಅನ್ನನಾಳದ ಚಿಕಿತ್ಸೆ ಮತ್ತು ಶಸ್ತ್ರಚಿಕಿತ್ಸೆ, ಕರುಳಿನ ಶಸ್ತ್ರಚಿಕಿತ್ಸೆ, ಸ್ತನ ಸಂಬಂಧಿತ ಚಿಕಿತ್ಸೆ ಮತ್ತು ಶಸ್ತ್ರಚಿಕಿತ್ಸೆ, ಹರ್ನಿಯ ಶಸ್ತ್ರಚಿಕಿತ್ಸೆ, ಅಪೆಂಡಿಕ್ಸ್ ಶಸ್ತ್ರಚಿಕಿತ್ಸೆ, ಮೂಳೆ ಮುರಿತ/ಡಿಸ್‌ಲೊಕೇಶನ್ ಚಿಕಿತ್ಸೆ, ಇತರೆ ಔದ್ಯೋಗಿಕ ಖಾಯಿಲೆಗಳ ಚಿಕಿತ್ಸೆಗಳಿಗೆ **ರೂ.2,00,000/-**ವರೆಗೆ
15. **ಮದುವೆ ಸಹಾಯಧನ (ಗೃಹ ಲಕ್ಷ್ಮೀ ಬಾಂಡ್):** ಫಲಾನುಭವಿ ಅಥವಾ ಅವರ ಇಬ್ಬರು ಮಕ್ಕಳ ಮದುವೆಗೆ ತಲಾ **ರೂ.50,000/-**
16. **LPG ಸಂಪರ್ಕ ಸೌಲಭ್ಯ (ಕಾರ್ಮಿಕ ಅನಿಲ ಭಾಗ್ಯ):** ಅನಿಲ ಸಂಪರ್ಕದೊಂದಿಗೆಎರಡು ಬರ್ನರ್ ಸ್ಟೌವ್
17. **ಬಿಎಂಟಿಸಿ ಬಸ್ ಪಾಸ್ ಸೌಲಭ್ಯ:** ಬೆಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಯಲ್ಲಿ ಕೆಲಸ ಮಾಡುತ್ತಿರುವಂತಹ / ವಾಸಸ್ಥಳದಿಂದ ಬೆಂಗಳೂರಿಗೆ ಪ್ರಯಾಣಿಸುವ ನೋಂದಾಯಿತ ಕಟ್ಟಡ ಕಾರ್ಮಿಕರಿಗೆ
18. **ಕೆಎಸ್‌ಆರ್‌ಟಿಸಿ ಬಸ್ ಪಾಸ್‌ನ ಸೌಲಭ್ಯ:** ರಾಜ್ಯದಾದ್ಯಂತ ವಿದ್ಯಾಭ್ಯಾಸದಲ್ಲಿ ತೊಡಗಿರುವ ನೋಂದಾಯಿತ ಕಾರ್ಮಿಕರ ಇಬ್ಬರು ಮಕ್ಕಳಿಗೆ (ಈ ಯೋಜನೆಯನ್ನು ಜಾರಿಗೊಳಿಸಲಾಗುತ್ತಿದೆ)
19. **ತಾಯಿ ಮಗು ಸಹಾಯ ಹಸ್ತ:** ಮಹಿಳಾ ಫಲಾನುಭವಿಯು ಮಗುವಿಗೆ ಜನ್ಮ ನೀಡಿದ ಸಂದರ್ಭದಲ್ಲಿ ಆಕೆಯ ಮಗುವಿನ ಶಾಲಾ ಪೂರ್ವ ಶಿಕ್ಷಣ ಮತ್ತು ಪೌಷ್ಠಿಕತೆಗಾಗಿ ಮಗುವಿಗೆ ಮೂರು ವರ್ಷಗಳು ತುಂಬುವವರೆಗೆ ವಾರ್ಷಿಕ **ರೂ.6,000/-** ಗಳ ಸಹಾಯಧನ.

# ಅನುಬಂಧ-02

(ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 3822)

ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿಯು ಜಾರಿಗೊಳಿಸುತ್ತಿರುವ ಯೋಜನೆಗಳಡಿ ಕಳೆದ ಮೂರು ವರ್ಷಗಳಡಿ ಬಿಡುಗಡೆಯಾದ ಅನುದಾನದ ವಿವರ

| ಯೋಜನೆ | ರಾಜ್ಯ ಸರ್ಕಾರದಿಂದ ಮಂಡಳಿಗೆ ಬಿಡುಗಡೆಯಾದ ಅನುದಾನ | | | ಯಾದಗಿರಿ ಜಿಲ್ಲೆಗೆ ಸಂಬಂಧಿಸಿದಂತೆ ಬಿಡುಗಡೆಯಾದ ಅನುದಾನ | | | ಷರಾ |
|---|---|---|---|---|---|---|---|
| | 2017-18 | 2018-19 | 2019-20 | 2017-18 | 2018-19 | 2019-20 | |
| ಕರ್ನಾಟಕ ರಾಜ್ಯ ಖಾಸಗಿ ವಾಣಿಜ್ಯ ಸಾರಿಗೆ ಕಾರ್ಮಿಕರ ಅಪಘಾತ ಪರಿಹಾರ ಯೋಜನೆ | 1750 | 1312.50 | 499.50 | – | – | – | ಸದರಿ ಯೋಜನೆಗಳಡಿ ಪ್ರತ್ಯೇಕವಾಗಿ ಜಿಲ್ಲಾವಾರು ಅನುದಾನ ಹಂಚಿಕೆಯಾಗಿರುವುದಿಲ್ಲ. ಆದರೆ ಅರ್ಹ ಫಲಾನುಭವಿಗಳಿಗೆ ಪರಿಹಾರದ ಮೊತ್ತವನ್ನು ನೇರವಾಗಿ ವಿತರಿಸಲಾಗುತ್ತಿದೆ. |
| ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿ ಹಾಗೂ ಅಂಬೇಡ್ಕರ್ ಕಾರ್ಮಿಕ ಸಹಾಯ ಹಸ್ತ. ಯೋಜನೆ | 1135 | 2216.90 | 1034.50 | – | – | – | |

## ಅನುಬಂಧ-03

(ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 3822)

ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿಯ ವಿವಿಧ ಸೌಲಭ್ಯಗಳನ್ನು ಪಡೆಯಲು ಸಲ್ಲಿಸಬೇಕಾದ ದಾಖಲೆ ಮತ್ತು ಇರುವ ಮಾನ ದಂಡಗಳು

| ಕ್ರ.ಸಂ | ಫಲಾನುಭವಿ ಆಧಾರಿತ ಯೋಜನೆ/ ಕಾರ್ಯಕ್ರಮ | ಸೌಲಭ್ಯಗಳನ್ನು ಪಡೆಯಲು ಸಲ್ಲಿಸಬೇಕಾದ ದಾಖಲೆ ಮತ್ತು ಇರುವ ಮಾನದಂಡಗಳು |
|---|---|---|
| 01 | ಪಿಂಚಣಿ ಸೌಲಭ್ಯ: | • ನಮೂನೆ-12 ರಲ್ಲಿ ಪೂರ್ಣವಾದ ಮಾಹಿತಿಯನ್ನು ಭರ್ತಿ ಮಾಡಿದ ಅರ್ಜಿ.<br>• ಮಂಡಳಿಯಿಂದ ನೀಡಿರುವ ಚಾಲ್ತಿಯಲ್ಲಿರುವ ಮೂಲ ಗುರುತಿನ ಚೀಟಿ / ಸ್ಮಾರ್ಟ್ ಕಾರ್ಡ್ ಸಲ್ಲಿಸುವುದು.<br>• ಫಲಾನುಭವಿಯು ವಂತಿಕೆ ಹಣ ಪೂರ್ಣವಾಗಿ ಪಾವತಿಸಿರುವ ಬಗ್ಗೆ ನೋಂದಣಿ ಅಧಿಕಾರಿಗಳಿಂದ ಪಡೆದ ದೃಢೀಕರಣ ಪತ್ರ.<br>• ಫಲಾನುಭವಿಯು 60 ವರ್ಷ ಪೂರೈಸುವ ಪೂರ್ವದಲ್ಲಿ ಕನಿಷ್ಠ 3 ವರ್ಷ ಮಂಡಳಿಯ ಸದಸ್ಯತ್ವವನ್ನು ಪೂರ್ಣಗೊಳಿಸಿರಬೇಕು.<br>• ಫಲಾನುಭವಿ 12ಎ ನಮೂನೆಯಲ್ಲಿ ಜೀವಿತ ಪ್ರಮಾಣಪತ್ರವನ್ನು ಸಲ್ಲಿಸಬೇಕು ಹಾಗು ಪ್ರತಿ ವರ್ಷ ಡಿಸೆಂಬರ್ ಮಾಹೆಯ ಅಂತ್ಯದೊಳಗೆ ಜೀವಿತ ಪ್ರಮಾಣ ಪತ್ರ ಸಲ್ಲಿಸಬೇಕು.<br>• ಅರ್ಜಿದಾರರ ಬ್ಯಾಂಕ್ ಪಾಸ್ ಪುಸ್ತಕದ ಪ್ರತಿ ಸಲ್ಲಿಸಬೇಕು.<br>• ಸರ್ಕಾರದ ಇತರೆ ಇಲಾಖೆಗಳಿಂದ ಈಗಾಗಲೇ ಸದರಿ ಯೋಜನೆಯಡಿ ಯಾವುದೇ ಪಿಂಚಣಿಯನ್ನು ಪಡೆದಿರಬಾರದು. |
| 02 | ಕುಟುಂಬ ಪಿಂಚಣಿ ಸೌಲಭ್ಯ | • ನಮೂನೆ-12ಂ ರಲ್ಲಿ ಪೂರ್ಣವಾದ ಮಾಹಿತಿಯನ್ನು ಭರ್ತಿ ಮಾಡಿದ ಅರ್ಜಿ<br>• ಮೃತ ಪಿಂಚಣಿದಾರರ ಮರಣ ಪ್ರಮಾಣ ಪತ್ರ ಸಲ್ಲಿಸಬೇಕು.<br>• ಮೃತ ಫಲಾನುಭವಿಯ ಪತಿ/ಪತ್ನಿ ಎಂಬುವುದನ್ನು ಖಚಿತ ಪಡಿಸುವುದಕ್ಕೆ ಕಂದಾಯ ಇಲಾಖೆಯಿಂದ ಪಡೆದ ದಾಖಲೆ<br>• ಅರ್ಜಿದಾರರ ಬ್ಯಾಂಕ್ ಪಾಸ್ ಪುಸ್ತಕದ ಪ್ರತಿ.<br>• ಅರ್ಜಿದಾರರ ಒಂದು ಭಾವ ಚಿತ್ರ. |
| 03 | ದುರ್ಬಲತೆ ಪಿಂಚಣಿ | • ನಮೂನೆ-14 ರಲ್ಲಿ ಪೂರ್ಣವಾದ ಮಾಹಿತಿಯನ್ನು ಭರ್ತಿ ಮಾಡಿದ ಅರ್ಜಿ.<br>• ಮಂಡಳಿಯಿಂದ ನೀಡಿರುವ ಚಾಲ್ತಿಯಲ್ಲಿರುವ ಮೂಲ ಗುರುತಿನ ಚೀಟಿ / ಸ್ಮಾರ್ಟ್ ಕಾರ್ಡ್ ಸಲ್ಲಿಸುವುದು.<br>• ಫಲಾನುಭವಿಯು ವಂತಿಕೆ ಹಣ ಪೂರ್ಣವಾಗಿ ಪಾವತಿಸಿರುವ ಬಗ್ಗೆ ನೋಂದಣಿ ಅಧಿಕಾರಿಗಳಿಂದ ಪಡೆದ ದೃಢೀಕರಣ ಪತ್ರ.<br>• ಫಲಾನುಭವಿಯು ಹೊಂದಿರುವ ಬ್ಯಾಂಕ್ ಪಾಸ್ ಪುಸ್ತಕದ ಪ್ರತಿ. |

|  |  |  |
|---|---|---|
|  |  | • ಶಾಶ್ವತ ದುರ್ಬಲತೆಯಾಗಿರುವುದಕ್ಕೆ ಕಟ್ಟಡ ಕಾರ್ಮಿಕನ ಭಾವಚಿತ್ರ (ಫೋಟೋ).<br>• ಹಿರಿಯ ನಾಗರೀಕರ ಸಬಲೀಕರಣ ಹಾಗೂ ವಿಕಲ ಚೇತನ ಇಲಾಖೆಯಿಂದ ಗುರುತಿನ ಚೀಟಿ ಪಡೆದ ನಂತರ 6 ತಿಂಗಳೊಳಗಾಗಿ ಅರ್ಜಿ ಸಲ್ಲಿಸಬೇಕು.<br>• ಫಲಾನುಭವಿಯು ಖಾಯಿಲೆಗಳಿಂದ ಅಥವಾ ಕಟ್ಟಡ ನಿರ್ಮಾಣ ಸ್ಥಳದಲ್ಲಿ ಆದ ಅಪಘಾತಯಿಂದಂದಾಗಿ ದುರ್ಬಲತೆಯಾಗಿರಬೇಕು.<br>• ಫಲಾನುಭವಿಗೆ ದುರ್ಬಲತೆಯಾಗಿರುವುದಕ್ಕೆ ಹಿರಿಯ ನಾಗರಿಕರ ಹಾಗೂ ಅಂಗವಿಕಲ ಸಬಲೀಕರಣ ಇಲಾಖೆ ಇವರಿಂದ ಪಡೆದ ಅಂಗವಿಕಲ ಗುರುತಿನ ಚೀಟಿಯ ಪ್ರತಿಯನ್ನು ಲಗತ್ತಿಸಬೇಕು.<br>• ಫಲಾನುಭವಿಯು ನಮೂನೆ 14ಎ ರಲ್ಲಿ ಜೀವಿತ ಪ್ರಮಾಣ ಪತ್ರ ಸಲ್ಲಿಸಬೇಕು ಹಾಗೂ ಪ್ರತಿ ವರ್ಷ ಡಿಸೆಂಬರ್ ಮಾಹೆಯ ಅಂತ್ಯದೊಳಗೆ ಜೀವಿತ ಪ್ರಮಾಣ ಪತ್ರ ಸಲ್ಲಿಸಬೇಕು. |
| 04 | ಕನ್ನಡಕ, ಶ್ರವಣಯಂತ್ರ, ಕೃತಕ ಕೈಕಾಲು ಮತ್ತು ಗಾಲಿ ಕುರ್ಚಿ ಮರುಪಾವತಿ ಸೌಲಭ್ಯ | • ನಮೂನೆ-14ಸಿ ರಲ್ಲಿ ಪೂರ್ಣವಾದ ಮಾಹಿತಿಯನ್ನು ಭರ್ತಿ ಮಾಡಿದ ಅರ್ಜಿ.<br>• ಮಂಡಳಿಯಿಂದ ನೀಡಿರುವ ಚಾಲ್ತಿಯಲ್ಲಿರುವ ಗುರುತಿನ ಚೀಟಿ / ಸ್ಮಾರ್ಟ್ ಕಾರ್ಡ್ ಸಲ್ಲಿಸುವುದು.<br>• ಫಲಾನುಭವಿಯು ವಂತಿಕೆ ಹಣ ಪೂರ್ಣವಾಗಿ ಪಾವತಿಸಿರುವ ಬಗ್ಗೆ ನೋಂದಣಿ ಅಧಿಕಾರಿಗಳಿಂದ ದೃಢೀಕರಣ ಪತ್ರ.<br>• ಫಲಾನುಭವಿ ಹೊಂದಿರುವ ಬ್ಯಾಂಕ್ ಪಾಸ್ ಪುಸ್ತಕದ ಪ್ರತಿ.<br>• ಫಲಾನುಭವಿಯು ಸರ್ಕಾರಿ / ಸರ್ಕಾರದಿಂದ ಮಾನ್ಯತೆ ಪಡೆದ (ಶೆಡ್ಯೂಲ್ 1ಗೆ ಸೇರಿದ) ಖಾಸಗಿ ಆಸ್ಪತ್ರೆಗಳಲ್ಲಿ ಚಿಕಿತ್ಸೆ ಪಡೆದಿರುವ ಬಗ್ಗೆ ವೈದ್ಯಕೀಯ ಪ್ರಮಾಣ ಪತ್ರವನ್ನು ಸಲ್ಲಿಸಬೇಕು.<br>• ಫಲಾನುಭವಿ ಒಂದು ಬಾರಿ ಮಾತ್ರ ತನಗೆ ಅಥವಾ ಕುಟುಂಬದ ಇಬ್ಬರು ಸದಸ್ಯರಿಗಾಗಿ ಪಡೆಯಬಹುದಾಗಿದೆ.<br>• ಸರ್ಕಾರದ ಇತರೆ ಇಲಾಖೆಗಳಿಂದ ಸದರಿ ಯೋಜನೆಯಡಿಯಲ್ಲಿ ಸೌಲಭ್ಯವನ್ನು ಪಡೆದಿರಬಾರದು. |
| 05 | ಟ್ರೈನಿಂಗ್-ಕಮ್-ಟೂಲ್‌ಕಿಟ್ ಸೌಲಭ್ಯ (ಶ್ರಮ ಸಾಮರ್ಥ್ಯ) | • ನಮೂನೆ-15 ರಲ್ಲಿ ಪೂರ್ಣವಾದ ಮಾಹಿತಿಯನ್ನು ಭರ್ತಿ ಮಾಡಿದ ಅರ್ಜಿ.<br>• ಮಂಡಳಿಯಿಂದ ನೀಡಿರುವ ಚಾಲ್ತಿಯಲ್ಲಿರುವ ಗುರುತಿನ ಚೀಟಿ / ಸ್ಮಾರ್ಟ್ ಕಾರ್ಡ್ ಸಲ್ಲಿಸುವುದು.<br>• ಫಲಾನುಭವಿಯು ವಂತಿಕೆ ಹಣ ಪೂರ್ಣವಾಗಿ ಪಾವತಿಸಿರುವ ಬಗ್ಗೆ ನೋಂದಣಿ ಅಧಿಕಾರಿಗಳಿಂದ ಪಡೆದ ದೃಢೀಕರಣ ಪತ್ರ.<br>• ಫಲಾನುಭವಿ ಹೊಂದಿರುವ ಬ್ಯಾಂಕ್ ಪಾಸ್ ಪುಸ್ತಕದ ಪ್ರತಿ.<br>• ಫಲಾನುಭವಿಯು ಸದಸ್ಯತ್ವ ಅವಧಿಯಲ್ಲಿ ಒಂದು ಬಾರಿ ಮಾತ್ರ ಈ ಸೌಲಭ್ಯವನ್ನು ಪಡೆದಿರುವ ಬಗ್ಗೆ ಖಾತ್ರಿ ಪಡಿಸಿಕೊಳ್ಳಬೇಕು.<br>• ಫಲಾನುಭವಿಯು ತರಬೇತಿ ಪಡೆಯಲು 55 ವರ್ಷ ವಯಸ್ಸಿನ |
| 06 | ಶ್ರಮ ಸಂಸಾರ ಸಾಮರ್ಥ್ಯ ತರಬೇತಿ ಸೌಲಭ್ಯ |  |

| | | |
|---|---|---|
| | | ಒಳಗಿರಬೇಕು. |
| 07 | ವಸತಿ ಸೌಲಭ್ಯ (ಕಾರ್ಮಿಕ ಗೃಹ ಭಾಗ್ಯ) | • ನಮೂನೆ-16 ರಲ್ಲಿ ಪೂರ್ಣವಾದ ಮಾಹಿತಿಯನ್ನು ಭರ್ತಿ ಮಾಡಿದ ಅರ್ಜಿ<br>• ಮಂಡಳಿಯಿಂದ ನೀಡಿರುವ ಗುರುತಿನ ಚೀಟಿ/ಸ್ಮಾರ್ಟ್ ಕಾರ್ಡ್ ಪ್ರತಿ ಸಲ್ಲಿಸುವುದು<br>• ಫಲಾಭವಿಯು ವಂತಿಕೆ ಹಣ ಪೂರ್ಣವಾಗಿ ಪಾವತಿಸಿರುವ ಬಗ್ಗೆ ನೋಂದಣಿ ಅಧಿಕಾರಿಗಳಿಂದ ಪಡೆದ ದೃಢೀಕರಣ ಪತ್ರ<br>• ಅರ್ಜಿ ಸಲ್ಲಿಸುವ ಫಲಾನುಭವಿಗೆ ಕನಿಷ್ಠ 45 ವರ್ಷ ವಯಸ್ಸಾಗಿರಬೇಕು<br>• ಸರ್ಕಾರದಿಂದ ಯಾವುದಾದರೂ ಯೋಜನೆಯಡಿ ಮನೆ ನಿರ್ಮಾಣಕ್ಕಾಗಿ ಸಾಲ ಮಂಜೂರಾಗಿರಬೇಕು<br>• ಫಲಾನುಭವಿಯು ಹೊಂದಿರುವ ಬ್ಯಾಂಕ್ ಪಾಸ್‌ಬುಕ್‌ನ ಪ್ರತಿ ಸಲ್ಲಿಸುವುದು |
| 08 | ಹೆರಿಗೆ ಸೌಲಭ್ಯ (ತಾಯಿ ಲಕ್ಷ್ಮೀ ಬಾಂಡ್) | • ನಮೂನೆ-17 ರಲ್ಲಿ ಪೂರ್ಣವಾದ ಮಾಹಿತಿಯನ್ನು ಭರ್ತಿ ಮಾಡಿದ ಅರ್ಜಿ.<br>• ಮಂಡಳಿಯಿಂದ ನೀಡಿರುವ ಚಾಲ್ತಿಯಲ್ಲಿರುವ ಗುರುತಿನ ಚೀಟಿ / ಸ್ಮಾರ್ಟ್ ಕಾರ್ಡ್ ಸಲ್ಲಿಸುವುದು.<br>• ಫಲಾನುಭವಿಯು ವಂತಿಕೆ ಹಣ ಪೂರ್ಣವಾಗಿ ಪಾವತಿಸಿರುವ ಬಗ್ಗೆ ನೋಂದಣಿ ಅಧಿಕಾರಿಗಳಿಂದ ದೃಢೀಕರಣ ಪತ್ರ.<br>• ಫಲಾನುಭವಿಯು ಹೊಂದಿರುವ ಬ್ಯಾಂಕ್ ಪಾಸ್ ಪುಸ್ತಕದ ಪ್ರತಿ.<br>• ನೋಂದಾಯಿತ ಮಹಿಳಾ ಫಲಾನುಭವಿಯು ತನ್ನ ಮೊದಲ 2 ಹೆರಿಗೆಗಳಿಗೆ ಸಹಾಯಧನವನ್ನು ಪಡೆಯಲು ಅರ್ಹರಾಗಿರುತ್ತಾಳೆ. (ಕೇವಲ ಎರಡು ಜೀವಂತ ಮಕ್ಕಳಿದ್ದಾರೆ ಎನ್ನುವುದನ್ನು ಖಚಿತ ಪಡಿಸಿಕೊಳ್ಳಬೇಕು.)<br>• ಇದು ಎರಡನೇ ಹೆರಿಗೆ ಎಂದು ಅಫಿಡವಿಟ್ ಸಲ್ಲಿಸಬೇಕು.<br>• ಜನನ ಮತ್ತು ಮರಣ ಪ್ರಮಾಣ ನೊಂದಣಾಧಿಕಾರಿಗಳಿಂದ ಪಡೆದ ಜನನ ಪ್ರಮಾಣ ಪತ್ರ ಸಲ್ಲಿಸಬೇಕು.<br>• ಹೆರಿಗೆಯಾದ 6 ತಿಂಗಳೊಳಗೆ ಅರ್ಜಿಯನ್ನು ಸಲ್ಲಿಸಬೇಕು |
| 09 | ಶಿಶು ಪಾಲನಾ ಸೌಲಭ್ಯ | – |
| 10 | ಅಂತ್ಯಕ್ರಿಯೆ ವೆಚ್ಚ | • ನಮೂನೆ-18 ರಲ್ಲಿ ಪೂರ್ಣವಾದ ಮಾಹಿತಿಯನ್ನು ಭರ್ತಿ ಮಾಡಿದ ಅರ್ಜಿ.<br>• ಮಂಡಳಿಯಿಂದ ನೀಡಿರುವ ಚಾಲ್ತಿಯಲ್ಲಿರುವ ಮೂಲ ಗುರುತಿನ ಚೀಟಿ / ಸ್ಮಾರ್ಟ್ ಕಾರ್ಡ್ ಸಲ್ಲಿಸುವುದು.<br>• ಫಲಾನುಭವಿಯು ವಂತಿಕೆ ಹಣ ಪಾವತಿಸಿರುವ ಬಗ್ಗೆ ನೋಂದಣಿ ಅಧಿಕಾರಿಗಳಿಂದ ದೃಢೀಕರಣ ಪತ್ರ.<br>• ಫಲಾನುಭವಿ ಹೊಂದಿರುವ ಬ್ಯಾಂಕ್ ಪಾಸ್ ಪುಸ್ತಕದ ಪ್ರತಿ.<br>• ಮೃತ ಫಲಾನುಭವಿಯ ಮೂಲ / ದೃಢೀಕೃತ ಮರಣ ಪ್ರಮಾಣ ಪತ್ರವನ್ನು |

|  |  |  |
|---|---|---|
|  |  | ಲಗತ್ತಿಸಬೇಕು.<br>• ಮೃತ ಫಲಾನುಭವಿಯ ವಯಸ್ಸು 60 ವರ್ಷ ಮೀರದಿರುವ ಬಗ್ಗೆ ಖಾತ್ರಿಪಡಿಸಿಕೊಳ್ಳಬೇಕು.<br>• ಅರ್ಜಿದಾರನನ್ನು ಮೃತ ಫಲಾನುಭವಿಯ ನಾಮನಿರ್ದೇಶಿತನಾಗಿ ನೋಂದಾಯಿಸಲಾಗಿದೆಯೇ ಎಂದು ಖಚಿತ ಪಡಿಸಿಕೊಳ್ಳಬೇಕು.<br>• ಫಲಾನುಭವಿಯು ಮೃತನಾದ ಒಂದು ವರ್ಷದೊಳಗೆ ಅರ್ಜಿಯನ್ನು ಸಲ್ಲಿಸಬೇಕು.. |
| 11 | ಶೈಕ್ಷಣಿಕ ಸಹಾಯಧನ (ಕಲಿಕೆ ಭಾಗ್ಯ) | • ನಮೂನೆ-19 ರಲ್ಲಿ ಪೂರ್ಣವಾದ ಮಾಹಿತಿಯನ್ನು ಭರ್ತಿ ಮಾಡಿದ ಅರ್ಜಿ.<br>• ಮಂಡಳಿಯಿಂದ ನೀಡಿರುವ ಚಾಲ್ತಿಯಲ್ಲಿರುವ ಗುರುತಿನ ಚೀಟಿ / ಸ್ಮಾರ್ಟ್ ಕಾರ್ಡ್ ಸಲ್ಲಿಸುವುದು.<br>• ಫಲಾನುಭವಿಯು ವಂತಿಕೆ ಹಣ ಪೂರ್ಣವಾಗಿ ಪಾವತಿಸಿರುವ ಬಗ್ಗೆ ನೋಂದಣಿ ಅಧಿಕಾರಿಗಳಿಂದ ದೃಢೀಕರಣ ಪತ್ರ.<br>• ಫಲಾನುಭವಿ ಹೊಂದಿರುವ ಬ್ಯಾಂಕ್ ಪಾಸ್ ಪುಸ್ತಕದ ಪ್ರತಿ.<br>• ಫಲಾಭವಿಯ ಮಗ / ಮಗಳು ಉತ್ತೀರ್ಣ ಆಗಿರುವ ಕುರಿತು ಅಂಕಪಟ್ಟಿ ಹಾಗೂ ವ್ಯಾಸಂಗ ಮಾಡುತ್ತಿರುವ ಸಂಸ್ಥೆಯ ಮುಖ್ಯಸ್ಥರಿಂದ ವ್ಯಾಸಂಗ ಮೂಲ ಪ್ರಮಾಣ ಪತ್ರವನ್ನು ಸಲ್ಲಿಸಬೇಕು.<br>• ಫಲಾನುಭವಿಯ ಪ್ರಸ್ತುತ ಅರ್ಜಿಯು ಈ ಹಿಂದೆ ಶೈಕ್ಷಣಿಕ ಸಹಾಯಧನ ಪಡೆದ ಇಬ್ಬರು ಮಕ್ಕಳಿಗೆ ಅನ್ವಯಿಸಲಾಗಿದೆಯೇ ಎಂದು ಖಾತ್ರಿ ಪಡಿಸಿಕೊಳ್ಳಬೇಕು.<br>• ಶೈಕಣಿಕ ಸಹಾಯಧನ ಅರ್ಜಿಯನ್ನು ಶೈಕ್ಷಣಿಕ ವರ್ಷ ಪ್ರಾರಂಭವಾದ ದಿನದಿಂದ 6 ತಿಂಗಳ ಒಳಗೆ ಸಲ್ಲಿಸಬೇಕು.<br>• ನೋಂದಣಿಯಾದ ತಕ್ಷಣ ಸಹಾಯಧನ ಪಡೆಯಬಹುದು. |
| 12 | ವೈದ್ಯಕೀಯ ಸಹಾಯಧನ (ಕಾರ್ಮಿಕ ಆರೋಗ್ಯ ಭಾಗ್ಯ) | • ನಮೂನೆ-20 ರಲ್ಲಿ ಪೂರ್ಣವಾದ ಮಾಹಿತಿಯನ್ನು ಭರ್ತಿ ಮಾಡಿದ ಅರ್ಜಿ.<br>• ಮಂಡಳಿಯಿಂದ ನೀಡಿರುವ ಚಾಲ್ತಿಯಲ್ಲಿರುವ ಗುರುತಿನ ಚೀಟಿ / ಸ್ಮಾರ್ಟ್ ಕಾರ್ಡ್ ಸಲ್ಲಿಸುವುದು.<br>• ಫಲಾನುಭವಿಯು ವಂತಿಕೆ ಹಣ ಪೂರ್ಣವಾಗಿ ಪಾವತಿಸಿರುವ ಬಗ್ಗೆ ನೋಂದಣಿ ಅಧಿಕಾರಿಗಳಿಂದ ದೃಢೀಕರಣ ಪತ್ರ.<br>• ಫಲಾನುಭವಿ ಹೊಂದಿರುವ ಬ್ಯಾಂಕ್ ಪಾಸ್ ಪುಸ್ತಕದ ಪ್ರತಿ.<br>• ಫಲಾನುಭವಿಯು ಆಸ್ಪತ್ರೆಯಲ್ಲಿ ದಾಖಲಾದ ದಿನಾಂಕ ಹಾಗೂ ಬಿಡುಗಡೆಯಾದ ದಿನಾಂಕ ವಿವರಗಳನ್ನು ನಮೂದಿಸಬೇಕು.<br>• ಫಲಾನುಭವಿಯು ಸರ್ಕಾರಿ / ಸರ್ಕಾರದಿಂದ ಮಾನ್ಯತೆ ಪಡೆದ (ಶೆಡ್ಯೂಲ್ 1ಗೆ ಸೇರಿದ) ಖಾಸಗಿ ಆಸ್ಪತ್ರೆಗಳಲ್ಲಿ ಕನಿಷ್ಠ ಎರಡು ದಿನ ಒಳರೋಗಿಯಾಗಿ ದಾಖಲಾಗಿರುವ ಬಗ್ಗೆ ವೈದ್ಯಕೀಯ ಪ್ರಮಾಣ ಪತ್ರವನ್ನು ಸಲ್ಲಿಸಬೇಕು. |

| | | |
|---|---|---|
| | | • ಆಸ್ಪತ್ರೆಗೆ ದಾಖಲಾದ ದಿನಾಂಕದಿಂದ 6 ತಿಂಗಳೊಳಗೆ ಅರ್ಜಿಯನ್ನು ಸಲ್ಲಿಸಬೇಕು<br>• ನೋಂದಣಿಯಾದ ತಕ್ಷಣ ಸಂಭವಿಸಬಹುದಾದ ಖಾಯಿಲೆಗೆ ತಕ್ಷಣ ಸಹಾಯಧನ ಪಡೆಯಬಹುದು. |
| 13 | ಅಪಘಾತ ಪರಿಹಾರ | • ನಮೂನೆ-21 ರಲ್ಲಿ ಪೂರ್ಣವಾದ ಮಾಹಿತಿಯನ್ನು ಭರ್ತಿ ಮಾಡಿದ ಅರ್ಜಿ.<br>• ಮಂಡಳಿಯಿಂದ ನೀಡಿರುವ ಮೂಲ ಗುರುತಿನ ಚೀಟಿ / ಸ್ಮಾರ್ಟ್ ಕಾರ್ಡ್ ಸಲ್ಲಿಸುವುದು.<br>• ಫಲಾನುಭವಿಯು ವಂತಿಕೆ ಹಣ ಪೂರ್ಣವಾಗಿ ಪಾವತಿಸಿರುವ ಬಗ್ಗೆ ನೋಂದಣಿ ಅಧಿಕಾರಿಗಳಿಂದ ದೃಢೀಕರಣ ಪತ್ರ.<br>• ಪ್ರಥಮ ವರ್ತಮಾನ ವರದಿ ಹಾಗೂ ಪೋಸ್ಟ್ ಮಾರ್ಟಮ್ ರಿಪೋರ್ಟ್ ಪ್ರತಿ.<br>• ಫಲಾನುಭವಿ ಹೊಂದಿರುವ ಬ್ಯಾಂಕ್ ಪಾಸ್ ಪುಸ್ತಕದ ಪ್ರತಿ.<br>• ದೃಢೀಕೃತ ಮರಣ ಪ್ರಮಾಣ ಪತ್ರವನ್ನು ಸಲ್ಲಿಸಬೇಕು.<br>• ಅಪಘಾತದ ಸ್ವರೂಪವನ್ನು ನಮೂದಿಸಬೇಕು.<br>• ದುರ್ಬಲತೆ ಪ್ರಕರಣವಿದ್ದಲ್ಲಿ, ಅಪಘಾತದ ಪರಿಣಾಮವಾಗಿರುವ ಶಾಶ್ವತ-ಸಂಪೂರ್ಣ (ಪ್ರತಿ ಶತಃ 100ರಷ್ಟು) ಅಥವಾ ಶಾಶ್ವತ-ಭಾಗಶಃ (ಪ್ರತಿ ಶತಃ 100ಕ್ಕಿಂತ ಕಡಿಮೆ) ದುರ್ಬಲತೆಯಾದ ಬಗ್ಗೆ ಹಾಗೂ ದುರ್ಬಲತೆಯ ಶೇಕಡವಾರು ಪ್ರಮಾಣ ನಮೂದಿಸಬೇಕು.<br>• ಫಲಾನುಭವಿಗೆ ದುರ್ಬಲತೆಯಾದ ನಂತರ ತಪಾಸಣೆ ಮಾಡಿದ ಸರ್ಕಾರಿ / ಸರ್ಕಾರದ ಮಾನ್ಯತೆ ಪಡೆದ ಖಾಸಗಿ ಆಸ್ಪತ್ರೆ ವೈದ್ಯರಿಂದ ಶೇಕಡವಾರು ದುರ್ಬಲತೆ ಖಚಿತ ಪಡಿಸಿರುವ ವೈದ್ಯಕೀಯ ಪ್ರಮಾಣ ಪತ್ರವನ್ನು ಲಗತ್ತಿಸುವುದು.<br>• ನಮೂನೆ 21ಎ ನಲ್ಲಿ ನಿಯೋಜಕರಿಂದ ಪಡೆದ ವರದಿಯನ್ನು ಸಲ್ಲಿಸಬೇಕು.<br>• ಅಪಘಾತ ಸಂಭವಿಸಿದ ಒಂದು ವರ್ಷದೊಳಗೆ ಅರ್ಜಿಯನ್ನು ಸಲ್ಲಿಸಬೇಕು. |
| 14 | ಪ್ರಮುಖ ವೈದ್ಯಕೀಯ ವೆಚ್ಚ ಸಹಾಯಧನ (ಕಾರ್ಮಿಕ ಚಿಕಿತ್ಸಾ ಭಾಗ್ಯ) | • ನಮೂನೆ-22 ರಲ್ಲಿ ಪೂರ್ಣವಾದ ಮಾಹಿತಿಯನ್ನು ಭರ್ತಿ ಮಾಡಿದ ಅರ್ಜಿ<br>• ನಮೂನೆ-22 (ಎ) ರಲ್ಲಿ ಚಿಕಿತ್ಸೆ ನೀಡಿದ ವೈದ್ಯರಿಂದ ಮಾಹಿತಿಯನ್ನು ಭರ್ತಿ ಮಾಡಿ ಸಲ್ಲಿಸುವುದು<br>• ಮಂಡಳಿಯ ಚಾಲ್ತಿಯಲ್ಲಿರುವ ಗುರುತಿನ ಚೀಟಿ/ಸ್ಮಾರ್ಟ್ ಕಾರ್ಡ್ ಪ್ರತಿ ಸಲ್ಲಿಸುವುದು<br>• ಫಲಾಭವಿಯು ವಂತಿಕೆ ಹಣ ಪೂರ್ಣವಾಗಿ ಪಾವತಿಸಿರುವ ಬಗ್ಗೆ ನೋಂದಣಿ ಅಧಿಕಾರಿಗಳಿಂದ ದೃಢೀಕರಣ ಪತ್ರ<br>• ಸರ್ಕಾರಿ/ಸರ್ಕಾರದಿಂದ ಮಾನ್ಯತೆ ಪಡೆದ ಖಾಸಗಿ ಆಸ್ಪತ್ರೆ/ಆರ್.ಎಸ್.ಬಿ.ವೈ. ಯೋಜನೆಯಿಂದ ಮಾನ್ಯತೆ ಪಡೆದ ಆಸ್ಪತ್ರೆಗಳಲ್ಲಿ ಚಿಕಿತ್ಸೆ ಪಡೆದಿರಬೇಕು.<br>• ಆಸ್ಪತ್ರೆಯಿಂದ ಬಿಡುಗಡೆಯಾದ 6 ತಿಂಗಳೊಳಗಾಗಿ ಅರ್ಜಿ ಸಲ್ಲಿಸಬೇಕು |

| | | |
|---|---|---|
| | | • ಚಿಕಿತ್ಸೆ ಪಡೆದ ಮೂಲ ವೈದ್ಯಕೀಯ ದಾಖಲೆಗಳನ್ನು ಮತ್ತು ಬಿಲ್ಲುಗಳನ್ನು ಸಲ್ಲಿಸುವುದು<br>• ಫಲಾನುಭವಿಯು ಹೊಂದಿರುವ ಬ್ಯಾಂಕ್ ಪಾಸ್‌ಬುಕ್‌ನ ಪ್ರತಿ ಸಲ್ಲಿಸುವುದು |
| 15 | ಮದುವೆ ಸಹಾಯಧನ (ಗೃಹ ಲಕ್ಷ್ಮೀ ಬಾಂಡ್) | • ಮದುವೆಯ ಸಹಾಯಧನ ಪಡೆಯಲು ಫಲಾನುಭವಿಯಾಗಿ 01 ವರ್ಷ ಪೂರ್ಣಗೊಂಡಿರಬೇಕು.<br>• ನಮೂನೆ-23 ರಲ್ಲಿ ಪೂರ್ಣವಾದ ಮಾಹಿತಿಯನ್ನು ಭರ್ತಿ ಮಾಡಿದ ಅರ್ಜಿ<br>• ಮಂಡಳಿಯಿಂದ ನೀಡಿರುವ ಗುರುತಿನ ಚೀಟಿ/ಸ್ಮಾರ್ಟ್ ಕಾರ್ಡ್ ಪ್ರತಿ ಸಲ್ಲಿಸುವುದು<br>• ಫಲಾಭವಿಯು ವಂತಿಕೆ ಹಣ ಪೂರ್ಣವಾಗಿ ಪಾವತಿಸಿರುವ ಬಗ್ಗೆ ನೋಂದಣಿ ಅಧಿಕಾರಿಗಳಿಂದ ದೃಢೀಕರಣ ಪತ್ರ<br>• ನೋಂದಣಿಯಾಗಿ ಒಂದು ವರ್ಷ ಪೂರೈಯಿಸಿದ ನಂತರ ಫಲಾನುಭವಿ/ಮಕ್ಕಳಿಗೆ ಮದುವೆಯಾಗಿರಬೇಕು<br>• ಮದುವೆಯಾದ 6 ತಿಂಗಳ ಒಳಗಾಗಿ ಅರ್ಜಿ ಸಲ್ಲಿಸಬೇಕು<br>• ಫಲಾನುಭವಿಯು ಹೊಂದಿರುವ ಬ್ಯಾಂಕ್ ಪಾಸ್‌ಬುಕ್‌ನ ಪ್ರತಿ ಸಲ್ಲಿಸುವುದು |
| 16 | ಐಕಲು ಸಂಪರ್ಕ ಸೌಲಭ್ಯ (ಕಾರ್ಮಿಕ ಅನಿಲ ಭಾಗ್ಯ) | • ನಮೂನೆ-23 (ಎ) ರಲ್ಲಿ ಪೂರ್ಣವಾದ ಮಾಹಿತಿಯನ್ನು ಭರ್ತಿ ಮಾಡಿದ ಅರ್ಜಿ<br>• ಮಂಡಳಿಯಿಂದ ನೀಡಿರುವ ಗುರುತಿನ ಚೀಟಿ/ಸ್ಮಾರ್ಟ್ ಕಾರ್ಡ್ ಪ್ರತಿ ಸಲ್ಲಿಸುವುದು<br>• ಫಲಾಭವಿಯು ವಂತಿಕೆ ಹಣ ಪೂರ್ಣವಾಗಿ ಪಾವತಿಸಿರುವ ಬಗ್ಗೆ ನೋಂದಣಿ ಅಧಿಕಾರಿಗಳಿಂದ ದೃಢೀಕರಣ ಪತ್ರ<br>• ಫಲಾನುಭವಿಯ ಕುಟುಂಬದ ಒಬ್ಬ ಸದಸ್ಯರು ಮಾತ್ರ ಸೌಲಭ್ಯ ಪಡೆಯಲು ಅವಕಾಶವಿರುತ್ತದೆ.<br>• ಆಧಾರ್ ಕಾರ್ಡ್, ಪಡಿತರ ಚೀಟಿ ಮತ್ತು ನೋಟರಿಯಿಂದ ಪಡೆದ ಅಫಿಡವಿಟ್ ಅಥವಾ ಆಹಾರ ನಿರೀಕ್ಷಕರಿಂದ ಪಡೆದ ಪ್ರಮಾಣ ಪತ್ರವನ್ನು ಸಲ್ಲಿಸುವುದು. |
| 17 | ಬಿಎಂಟಿಸಿ ಬಸ್ ಪಾಸ್ ಸೌಲಭ್ಯ | • ನಮೂನೆ-23 (ಬಿ) ರಲ್ಲಿ ಪೂರ್ಣವಾದ ಮಾಹಿತಿಯನ್ನು ಭರ್ತಿ ಮಾಡಿದ ಅರ್ಜಿ<br>• ಮಂಡಳಿಯಿಂದ ನೀಡಿರುವ ಗುರುತಿನ ಚೀಟಿ/ಸ್ಮಾರ್ಟ್ ಕಾರ್ಡ್ ಪ್ರತಿ ಸಲ್ಲಿಸುವುದು<br>• ಫಲಾಭವಿಯು ವಂತಿಕೆ ಹಣ ಪೂರ್ಣವಾಗಿ ಪಾವತಿಸಿರುವ ಬಗ್ಗೆ ನೋಂದಣಿ ಅಧಿಕಾರಿಗಳಿಂದ ದೃಢೀಕರಣ ಪತ್ರ<br>• ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ಖಾಯಂ ವಿಳಾಸ ಹೊಂದಿರುವ ಫಲಾನುಭವಿಯಾಗಿರಬೇಕು<br>• ಆಧಾರ್ ಕಾರ್ಡ್ ಮತ್ತು ಪಡಿತರ ಚೀಟಿ ಪ್ರತಿ ಸಲ್ಲಿಸುವುದು. |

| | | |
|---|---|---|
| | | • ಬಿಎಂಟಿಸಿ ಸಂಸ್ಥೆ ನೀಡುವ ಬಸ್ ಪಾಸ್ ಅರ್ಜಿಯನ್ನು ಭರ್ತಿ ಮಾಡಿ ಸಲ್ಲಿಸುವುದು. |
| 18 | ಕೆಎಸ್ಆರ್‌ಟಿಸಿ ಬಸ್ ಪಾಸ್‌ನ ಸೌಲಭ್ಯ | • ನಮೂನೆ-23 (ಸಿ) ರಲ್ಲಿ ಪೂರ್ಣವಾದ ಮಾಹಿತಿಯನ್ನು ಭರ್ತಿ ಮಾಡಿದ ಅರ್ಜಿ<br>• ಮಂಡಳಿಯಿಂದ ನೀಡಿರುವ ಗುರುತಿನ ಚೀಟಿ/ಸ್ಮಾರ್ಟ್ ಕಾರ್ಡ್ ಪ್ರತಿ ಸಲ್ಲಿಸುವುದು<br>• ಫಲಾಭವಿಯು ವಂತಿಕೆ ಹಣ ಪೂರ್ಣವಾಗಿ ಪಾವತಿಸಿರುವ ಬಗ್ಗೆ ನೋಂದಣಿ ಅಧಿಕಾರಿಗಳಿಂದ ದೃಢೀಕರಣ ಪತ್ರ<br>• ಫಲಾನುಭವಿಯ ಇಬ್ಬರು ಮಕ್ಕಳಿಗೆ ಮಾತ್ರ ಖಾಯಂ ವಿಳಾಸದಿಂದ ವಿದ್ಯಾ ಸಂಸ್ಥೆಯವರಿಗೆ ಕೆ.ಎಸ್.ಆರ್.ಟಿ.ಸಿ. ಬಸ್‌ಪಾಸ್ ಸೌಲಭ್ಯ ಪಡೆಯಲು ಅವಕಾಶವಿರುತ್ತದೆ.<br>• ಆಧಾರ್ ಕಾರ್ಡ್ ಮತ್ತು ಪಡಿತರ ಚೀಟಿ ಪ್ರತಿ ಸಲ್ಲಿಸುವುದು.<br>• ಕೆ.ಎಸ್.ಆರ್.ಟಿ.ಸಿ. ಸಂಸ್ಥೆ ನೀಡುವ ಬಸ್ ಪಾಸ್ ಅರ್ಜಿಯನ್ನು ಭರ್ತಿ ಮಾಡಿ ಸಲ್ಲಿಸುವುದು |
| 19 | ತಾಯಿ ಮಗು ಸಹಾಯ ಹಸ್ತ | • ನಮೂನೆ-17-ಎ ರಲ್ಲಿ ಪೂರ್ಣವಾದ ಮಾಹಿತಿಯನ್ನು ಭರ್ತಿ ಮಾಡಿದ ಅರ್ಜಿ.<br>• ಮಂಡಳಿಯಿಂದ ನೀಡಿರುವ ಚಾಲ್ತಿಯಿರುವ ಗುರುತಿನ ಚೀಟಿ / ಸ್ಮಾರ್ಟ್ ಕಾರ್ಡ್ ಸಲ್ಲಿಸುವುದು.<br>• ಫಲಾನುಭವಿಯು ವಂತಿಕೆ ಹಣ ಪೂರ್ಣವಾಗಿ ಪಾವತಿಸಿರುವ ಬಗ್ಗೆ ನೋಂದಣಿ ಅಧಿಕಾರಿಗಳಿಂದ ದೃಢೀಕರಣ ಪತ್ರ.<br>• ಫಲಾನುಭವಿ ಹೊಂದಿರುವ ಬ್ಯಾಂಕ್ ಪಾಸ್ ಪುಸ್ತಕದ ಪ್ರತಿ.<br>• ನೋಂದಾಯಿತ ಮಹಿಳಾ ಫಲಾನುಭವಿಯು ತನ್ನ ಮೊದಲ ಎರಡು ಹೆರಿಗೆಗಳಿಗೆ ಸಹಾಯಧನವನ್ನು ಪಡೆಯಲು ಅರ್ಹರಾಗಿರುತ್ತಾಳೆ.<br>• ಎರಡನೇ ಹೆರಿಗೆಗೆ ಅರ್ಜಿ ಸಲ್ಲಿಸುವ ಸಂದರ್ಭದಲ್ಲಿ ಅಫಿಡವಿಟ್ ಸಲ್ಲಿಸಬೇಕು.<br>• ಜನನ ಮತ್ತು ಮರಣ ಪ್ರಮಾಣ ಅಧಿಕಾರಿಗಳಿಂದ ಜನನ ಪ್ರಮಾಣ ಪತ್ರ ಸಲ್ಲಿಸಬೇಕು.<br>• ಹೆರಿಗೆಯಾದ 6 ತಿಂಗಳೊಳಗೆ ಅರ್ಜಿಯನ್ನು ಸಲ್ಲಿಸಬೇಕು |

**ಕರ್ನಾಟಕ ಸರ್ಕಾರ**

ಸಂಖ್ಯೆ: ಕಾಇ 137 ಎಲ್‌ಇಟಿ 2021

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸಸೌಧ,
ಬೆಂಗಳೂರು, ದಿನಾಂಕ: 20/09/2021

**ಇವರಿಂದ:**
ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ,
ಕಾರ್ಮಿಕ ಇಲಾಖೆ,
ವಿಕಾಸಸೌಧ, ಬೆಂಗಳೂರು.

**ಇವರಿಗೆ:**
ಕಾರ್ಯದರ್ಶಿ,
ಕರ್ನಾಟಕ ವಿಧಾನ ಸಭೆ
ವಿಧಾನಸೌಧ, ಬೆಂಗಳೂರು.

ಮಾನ್ಯರೆ,

ವಿಷಯ: ಮಾನ್ಯ ವಿಧಾನ ಸಭೆಯ ಸದಸ್ಯರಾದ ಶ್ರೀ ಅಶೋಕ್ ನಾಯಕ್ ಕೆ.ಬಿ. (ಶಿವಮೊಗ್ಗ ಗ್ರಾಮಾಂತರ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 2780ಕ್ಕೆ ಉತ್ತರ ಸಲ್ಲಿಸುವ ಕುರಿತು.

*******

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನ ಸಭೆಯ ಸದಸ್ಯರಾದ ಶ್ರೀ ಅಶೋಕ್ ನಾಯಕ್ ಕೆ.ಬಿ. (ಶಿವಮೊಗ್ಗ ಗ್ರಾಮಾಂತರ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 2780ಕ್ಕೆ ಉತ್ತರದ 20 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಮುಂದಿನ ಸೂಕ್ತ ಕ್ರಮಕ್ಕಾಗಿ ತಮಗೆ ಕಳುಹಿಸಿಕೊಡಲು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮ ವಿಶ್ವಾಸಿ,

(ಪ್ರದೀಪ್ ಕುಮಾರ್ ಬಿ.ಎಸ್)
ಸರ್ಕಾರದ ಅಧೀನ ಕಾರ್ಯದರ್ಶಿ,
ಕಾರ್ಮಿಕ ಇಲಾಖೆ.

# ಕರ್ನಾಟಕ ವಿಧಾನ ಸಭೆ

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ 2780
2. ಮಾನ್ಯ ಸದಸ್ಯರ ಹೆಸರು ಶ್ರೀ ಅಶೋಕ್ ನಾಯಕ್ ಕೆ.ಬಿ. (ಶಿವಮೊಗ್ಗ ಗ್ರಾಮಾಂತರ)
3. ಉತ್ತರಿಸಬೇಕಾದ ದಿನಾಂಕ 25/03/2021
4. ಉತ್ತರಿಸುವವರು ಮಾನ್ಯ ಕಾರ್ಮಿಕ ಸಚಿವರು

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಶಿವಮೊಗ್ಗ ಜಿಲ್ಲೆಯಲ್ಲಿ ಎಷ್ಟು ಜನ ನೋಂದಾಯಿತ ಕಟ್ಟಡ ಕಾರ್ಮಿಕರಿದ್ದಾರೆ; (ತಾಲ್ಲುಕುವಾರು ವಿವರ ನೀಡುವುದು) | ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿಯಲ್ಲಿ ಶಿವಮೊಗ್ಗ ಜಿಲ್ಲೆಯಲ್ಲಿ ಒಟ್ಟು 1,01,576 ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರು ಫಲಾನುಭವಿಗಳಾಗಿ ನೊಂದಣಿಯಾಗಿರುತ್ತಾರೆ. <u>ತಾಲ್ಲೂಕುವಾರು ವಿವರ ಈ ಕೆಳಕಂಡಂತಿದೆ.</u><br><br>ಶಿವಮೊಗ್ಗ: 34,698<br>ಭದ್ರಾವತಿ: 14,537<br>ಸಾಗರ: 13326<br>ಸೊರಬ: 10181<br>ಹೊಸನಗರ: 9508<br>ತೀರ್ಥಹಳ್ಳಿ: 5585<br>ಶಿಕಾರಿಪುರ: 13741 |
| ಆ) | ನೋಂದಾಯಿತ ಕಟ್ಟಡ ಕಾರ್ಮಿಕರಿಗೆ ಸರ್ಕಾರದಿಂದ ದೊರೆಯುವ ಸೌಲಭ್ಯಗಳಾವುವು; (ಸಂಪೂರ್ಣ ವಿವರ ನೀಡುವುದು) | ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿವತಿಯಿಂದ ನೊಂದಾಯಿತ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರಿಗೆ ಮತ್ತು ಅವರ ಅವಲಂಬಿತರಿಗಾಗಿ 19 ರೀತಿಯ ಕಲ್ಯಾಣ ಮತ್ತು ಸಾಮಾಜಿಕ ಭದ್ರತಾ ಸೌಲಭ್ಯಗಳನ್ನು ರೂಪಿಸಿ ಅನುಷ್ಠಾನಗೊಳಿಸಲಾಗುತ್ತಿದೆ. ವಿವರವನ್ನು <u>ಅನುಬಂಧ-01</u>ರಲ್ಲಿ ಲಗತ್ತಿಸಿದೆ. |
| ಇ) | ಶಿವಮೊಗ್ಗ ಗ್ರಾಮಾಂತರ ಕ್ಷೇತ್ರದಲ್ಲಿ ಎಷ್ಟು ಜನ ನೋಂಧಾಯಿತ ಕಟ್ಟಡ ಕಾರ್ಮಿಕರಿದ್ದಾರೆ; ನೋಂದಾವಣಿ ಯಾಗದೇ ಇರುವ ಕಾರ್ಮಿಕರ ನೋಂದಾವಣಿಗೆ ಸರ್ಕಾರ ಕೈಗೊಂಡ ಕ್ರಮಗಳೇನು; | ಶಿವಮೊಗ್ಗ ತಾಲ್ಲೂಕಿನಲ್ಲಿ ಒಟ್ಟು 34,698 ಜನ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರು ಮಂಡಳಿಯ ಫಲಾನುಭವಿಗಳಾಗಿ ನೋಂದಣಿಯಾಗಿರುತ್ತಾರೆ. ಆದರೆ, ಶಿವಮೊಗ್ಗ ಗ್ರಾಮಾಂತರ ವಿಧಾನಸಭಾ ಕ್ಷೇತ್ರದಲ್ಲಿ ನೋಂದಾಯಿತರಾದ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಮಾಹಿತಿಯು ಪ್ರತ್ಯೇಕವಾಗಿ ಲಭ್ಯವಿರುವುದಿಲ್ಲ.<br>ನೋಂದಣಿಯಾಗದೇ ಇರುವ ಕಾರ್ಮಿಕರ ನೋಂದಾಣಿಗಾಗಿ ಮಂಡಳಿಯ ವತಿಯಿಂದ ಈ ಕೆಳಕಂಡ ಕ್ರಮ ಅನುಸರಿಸಲಾಗುತ್ತಿದೆ.<br>• ಕಾರ್ಮಿಕ ನಿರೀಕ್ಷಕರು ಕಟ್ಟಡ ಕಾರ್ಮಿಕರು ಕೆಲಸ ನಿರ್ವಹಿಸುತ್ತಿರುವ ಸ್ಥಳಗಳಿಗೆ ತೆರಳಿ ನೋಂದಣಿಯಾಗದೇ ಇರುವ ಕಾರ್ಮಿಕರನ್ನು ನೋಂದಣಿ ಮಾಡಿಸುವಂತೆ ಮಾಲೀಕರಿಗೆ ನಿರ್ದೇಶನ ನೀಡಲಾಗಿರುತ್ತದೆ. |

| | | |
|---|---|---|
| | | • ಪ್ರಸ್ತುತ ವರ್ಷದಲ್ಲಿ ಶಿವಮೊಗ್ಗ ಜಿಲ್ಲೆಯಾದ್ಯಂತ ಸ್ಥಬ್ಧ ಚಿತ್ರದೊಂದಿಗೆ ಸಾರ್ವಜನಿಕರಿಗೆ 14 ಅರಿವು ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗಿರುತ್ತದೆ.<br>• KSRTC/ NEKRTC/ NWKRTC Bus Branding ಜಾಹೀರಾತಿನ ಮೂಲಕ ಪ್ರಚಾರಪಡಿಸಲಾಗಿದೆ.<br>• ರಾಜ್ಯ ರಸ್ತೆ ಸಾರಿಗೆ ಸಂಸ್ಥೆಯ ಬಸ್ ನಿಲ್ದಾಣಗಳಲ್ಲಿ ಒಂದು ತಿಂಗಳ ಅವಧಿಗೆ ಶ್ರಾವ್ಯ ಮಾಧ್ಯಮದ ಮೂಲಕ ಪ್ರಚಾರ ಮಾಡಲಾಗಿದೆ.<br>• ಮಂಡಳಿಯ ವತಿಯಿಂದ ಕಟ್ಟಡ ಹಾಗೂ ಇತರೆ ನಿರ್ಮಾಣ ಕಾರ್ಮಿಕರಿಗೆ ಮಂಡಳಿಯ ವತಿಯಿಂದ ಒದಗಿಸಲಾಗುತ್ತಿರುವ ಸೌಲಭ್ಯಗಳ ವಿವರಗಳ ಬಗ್ಗೆ Hoarding ಗಳನ್ನು ಮುದ್ರಿಸಿ ರಾಜ್ಯಾದ್ಯಂತ ಅಳವಡಿಸಲಾಗಿದೆ.<br>• ಮಂಡಳಿಯ ವತಿಯಿಂದ ಕಟ್ಟಡ ಹಾಗೂ ಇತರೆ ನಿರ್ಮಾಣ ಕಾರ್ಮಿಕರಿಗೆ ಮಂಡಳಿಯ ವತಿಯಿಂದ ಒದಗಿಸಲಾಗುತ್ತಿರುವ ಸೌಲಭ್ಯಗಳನ್ನೊಳಗೊಂಡ Banners ಗಳನ್ನು ಮುದ್ರಿಸಿ ಪ್ರತಿ ತಾಲ್ಲೂಕಿಗೆ 8 ರಂತೆ (ಒಟ್ಟು 1920) ಎಲ್ಲಾ ತಾಲ್ಲೂಕು ಕಾರ್ಮಿಕ ಕಛೇರಿಗಳಿಗೆ ಸರಬರಾಜು ಮಾಡಲಾಗಿರುತ್ತದೆ.<br>• Digital Wall Painting ಮೂಲಕ ನಿರ್ಮಾಣ ಕಾರ್ಮಿಕರಿಗೆ ಮಂಡಳಿಯ ವತಿಯಿಂದ ಒದಗಿಸಲಾಗುತ್ತಿರುವ ಸೌಲಭ್ಯಗಳನ್ನು ಪ್ರಾದೇಶಿಕ ಮಟ್ಟದಲ್ಲಿ ಪ್ರಚಾರ ಪಡಿಸಲು ಕ್ರಮ ಕೈಗೊಳ್ಳಲಾಗುತ್ತಿದೆ.<br>• BMTC ಬಸ್ ನಿಲ್ದಾಣಗಳಲ್ಲಿ 30 ಸೆಕೆಂಡ್ ಅವಧಿಯ ವೀಡಿಯೋ ಸ್ಪಾಟ್‌ಗಳಲ್ಲಿ ನಿರ್ಮಾಣ ಕಾರ್ಮಿಕರಿಗೆ ಮಂಡಳಿಯ ವತಿಯಿಂದ ಒದಗಿಸಲಾಗುತ್ತಿರುವ ಸೌಲಭ್ಯಗಳನ್ನು ಪ್ರಚಾರ ಪಡಿಸಲಾಗಿರುತ್ತದೆ.<br>• ಮಂಡಳಿಯ ವತಿಯಿಂದ ಕಟ್ಟಡ ಹಾಗೂ ಇತರೆ ನಿರ್ಮಾಣ ಕಾರ್ಮಿಕರಿಗೆ ಮಂಡಳಿಯ ವತಿಯಿಂದ ಒದಗಿಸಲಾಗುತ್ತಿರುವ ಸೌಲಭ್ಯಗಳನ್ನೊಳಗೊಂಡ Pamphlets ಗಳನ್ನು ಮುದ್ರಿಸಿ ಪ್ರತಿ ತಾಲ್ಲೂಕಿಗೆ 1,000 ದಂತೆ (ಒಟ್ಟು 2,40,000) ತಾಲ್ಲೂಕು ಕಾರ್ಮಿಕ ಕಛೇರಿಗಳಿಗೆ ಸರಬರಾಜು ಮಾಡಲಾಗಿರುತ್ತದೆ.<br>• ಕಟ್ಟಡ ಹಾಗೂ ಇತರೆ ನಿರ್ಮಾಣ ಕಾರ್ಮಿಕರಿಗೆ ಮಂಡಳಿಯ ವತಿಯಿಂದ ಒದಗಿಸಲಾಗುತ್ತಿರುವ ಸೌಲಭ್ಯಗಳನ್ನೊಳಗೊಂಡ Calendar ಗಳನ್ನು ಇಲಾಖೆಯ ಅಧಿಕಾರಿಗಳಿಗೆ ಸರಬರಾಜು ಮಾಡಲಾಗಿರುತ್ತದೆ.<br>• ರಾಜ್ಯದ ವಿವಿಧ ಕನ್ನಡ ದಿನ ಪತ್ರಿಕೆಗಳು ಮತ್ತು ಪತ್ರಿಕೆಗಳ ವಿಶೇಷಾಂಕಗಳಲ್ಲಿ ಮಂಡಳಿಯ ಯೋಜನೆಗಳು ಹಾಗೂ |

<table>
<tr><td></td><td></td><td>ಸೌಲಭ್ಯಗಳ ಕುರಿತು ಮಾಹಿತಿ ಪ್ರಕಟಿಸಲಾಗಿದೆ.<br>• ಮಂಡಳಿಯ ವತಿಯಿಂದ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರಿಗೆ ಒದಗಿಸಲಾಗುತ್ತಿರುವ ಸೌಲಭ್ಯಗಳನ್ನೊಳಗೊಂಡ ಸಾಕ್ಷ್ಯ ಚಿತ್ರ ಮತ್ತು ಕಿರು ಚಿತ್ರಗಳನ್ನು ಚಿತ್ರಿಸಲು ಕ್ರಮ ಕೈಗೊಳ್ಳಲಾಗುತ್ತಿದೆ.</td></tr>
<tr><td>ಈ)</td><td>ಶಿವಮೊಗ್ಗ ಜಿಲ್ಲೆಯಲ್ಲಿ ಕೋವಿಡ್-19 ಸಂದರ್ಭದಲ್ಲಿ ಎಷ್ಟು ಜನ ಕಾರ್ಮಿಕರಿಗೆ ಧನ ಸಹಾಯ ನೀಡಲಾಗಿದೆ : (ತಾಲ್ಲುಕುವಾರು ವಿವರ ನೀಡುವುದು)</td><td>1. <u>ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿ:</u><br>ಈ ಮಂಡಳಿಯಿಂದ ಶಿವಮೊಗ್ಗ ಜಿಲ್ಲೆಯಲ್ಲಿ ಕೋವಿಡ್-19 ಸಂದರ್ಭದಲ್ಲಿ 93,313 ನೋಂದಾಯಿತ ಫಲಾನುಭವಿಗಳಿಗೆ ತಲಾ ರೂ.5,000/- ಗಳ ಸಹಾಯ ಧನವನ್ನು ಅವರ ಖಾತೆಗೆ ನೇರವಾಗಿ ಜಮಾ ಮಾಡಲಾಗಿರುತ್ತದೆ. ತಾಲ್ಲೂಕುವಾರು ವಿವರ ಈ ಕೆಳಕಂಡಂತಿದೆ.
<table>
<tr><td>ಶಿವಮೊಗ್ಗ</td><td>31.598</td></tr>
<tr><td>ಭದ್ರಾವತಿ</td><td>11,303</td></tr>
<tr><td>ಸಾಗರ</td><td>9,639</td></tr>
<tr><td>ಸೊರಬ</td><td>10,433</td></tr>
<tr><td>ಶಿಕಾರಿಪುರ</td><td>15,188</td></tr>
<tr><td>ತೀರ್ಥಹಳ್ಳಿ</td><td>4,818</td></tr>
<tr><td>ಹೊಸನಗರ</td><td>10,334</td></tr>
<tr><td>ಒಟ್ಟು</td><td>93,313</td></tr>
</table>
2. ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿ:<br>ಈ ಮಂಡಳಿಯ ವತಿಯಿಂದ ಕೋವಿಡ್-19ರ ಲಾಕ್‌ಡೌನ್ ಕಾರಣ ಸಂಕಷ್ಟಕ್ಕೊಳಗಾದ ಕಾರ್ಮಿಕರಿಗೆ ರಾಜ್ಯ ಸರ್ಕಾರವು ಘೋಷಿಸಿದ ಒಂದು ಬಾರಿಯ ರೂ.5,000/- ಗಳ ವಿಶೇಷ ಪ್ಯಾಕೇಜ್ ಅಡಿ ಶಿವಮೊಗ್ಗ ಜಿಲ್ಲೆಗೆ ಸಂಬಂಧಿಸಿದಂತೆ 713 ಅಗಸ ವೃತ್ತಿಯ ಹಾಗೂ 1373 ಕ್ಷೌರಿಕರು ಸೇರಿದಂತೆ ಒಟ್ಟು 2086 ಫಲಾನುಭವಿಗಳಿಗೆ ರೂ.1,04,30,000/-ಗಳ ಧನಸಹಾಯ ನೀಡಲಾಗಿದೆ ತಾಲ್ಲೂಕುವಾರು ವಿವರವನ್ನು <u>ಅನುಬಂಧ-02</u>ರಲ್ಲಿ ಲಗತ್ತಿಸಿದೆ.</td></tr>
</table>

**ಕಾಇ 137 ಎಲ್‌ಇಟಿ 2021**

(ಅರಬೈಲ್ ಶಿವರಾಂ ಹೆಬ್ಬಾರ್)
ಕಾರ್ಮಿಕ ಸಚಿವರು

# ಅನುಬಂಧ-01

## (ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 2780)

**ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿವತಿಯಿಂದ ಫಲಾನುಭವಿಗಳಿಗೆ ಸಿಗುವ ಸೌಲಭ್ಯಗಳು**

1. ಪಿಂಚಣಿ ಸೌಲಭ್ಯ: ಮೂರು ವರ್ಷ ಸದಸ್ಯತ್ವದೊಂದಿಗೆ 60 ವರ್ಷ ಪೂರೈಸಿದ ಫಲಾನುಭವಿಗೆ ಮಾಸಿಕ ರೂ.2,000/-
2. ಕುಟುಂಬ ಪಿಂಚಣಿ ಸೌಲಭ್ಯ: ಮೃತ ಪಿಂಚಣಿದಾರರ ಪತಿ / ಪತ್ನಿ ಮಾಸಿಕ ರೂ.1000/-
3. ದುರ್ಬಲತೆ ಪಿಂಚಣಿ: ನೋಂದಾಯಿತ ಫಲಾನುಭವಿಯು ಖಾಯಿಲೆಗಳಿಂದ ಅಥವಾ ಕಟ್ಟಡ ಕಾಮಗಾರಿಗಳ ಅಪಘಾತದಿಂದ ಶಾಶ್ವತ/ಭಾಗಶಃ ಅಂಗವಿಕಲತೆ ಹೊಂದಿದ್ದರೆ ಮಾಸಿಕ ರೂ.2,000/- ಪಿಂಚಣಿ ಹಾಗೂ ಶೇಕಡವಾರು ದುರ್ಬಲತೆಯನ್ನಾಧರಿಸಿ ರೂ.2,00,000/- ದವರೆಗೆ ಅನುಗ್ರಹ ರಾಶಿ ಸಹಾಯಧನ.
4. ಕನ್ನಡಕ, ಶ್ರವಣಯಂತ್ರ, ಕೃತಕ ಕೈಕಾಲು ಮತ್ತು ಗಾಲಿ ಕುರ್ಚಿ ಮರುಪಾವತಿ ಸೌಲಭ್ಯ.
5. ಟ್ರೈನಿಂಗ್-ಕಮ್-ಟೂಲ್‌ಕಿಟ್‌ಸೌಲಭ್ಯ (ಶ್ರಮ ಸಾಮರ್ಥ್ಯ) : ರೂ.30,000/- ವರೆಗೆ
6. ಶ್ರಮ ಸಂಸಾರ ಸಾಮರ್ಥ್ಯ ತರಬೇತಿ ಸೌಲಭ್ಯ: ನೋಂದಾಯಿತ ಫಲಾನುಭವಿಯ ಅವಲಂಬಿತರಿಗೆ
7. ವಸತಿ ಸೌಲಭ್ಯ (ಕಾರ್ಮಿಕ ಗೃಹ ಭಾಗ್ಯ): ರೂ.2,00,000/- ದವರೆಗೆ ಮುಂಗಡ ಸೌಲಭ್ಯ
8. ಹೆರಿಗೆ ಸೌಲಭ್ಯ (ತಾಯಿ ಲಕ್ಷ್ಮೀ ಬಾಂಡ್): ಮಹಿಳಾ ಫಲಾನುಭವಿಯ ಮೊದಲ ಎರಡು ಮಕ್ಕಳಿಗೆ ಹೆಣ್ಣು ಮಗುವಿನ ಜನನಕ್ಕೆ ರೂ. 30,000/- ಮತ್ತು ಗಂಡು ಮಗುವಿನ ಜನನಕ್ಕೆ ರೂ.20,000/-
9. ಶಿಶು ಪಾಲನಾ ಸೌಲಭ್ಯ:
10. ಅಂತ್ಯಕ್ರಿಯೆ ವೆಚ್ಚ : ರೂ.4,000/- ಹಾಗೂ ಅನುಗ್ರಹ ರಾಶಿ ರೂ.50,000/-ಸಹಾಯಧನ
11. ಶೈಕ್ಷಣಿಕ ಸಹಾಯಧನ (ಕಲಿಕೆ ಭಾಗ್ಯ): ಫಲಾನುಭವಿಯ ಇಬ್ಬರು ಮಕ್ಕಳ ವಿದ್ಯಾಭ್ಯಾಸಕ್ಕಾಗಿ:

| ಕ್ರಸಂ | ತರಗತಿ (ಉತ್ತೀರ್ಣಕ್ಕೆ) | ವಾರ್ಷಿಕ ಸಹಾಯ ಧನ | |
|---|---|---|---|
| | | ಗಂಡು | ಹೆಣ್ಣು |
| I. | ನರ್ಸರಿ | 3,000 | 4,000 |
| II. | 1 ರಿಂದ 4ನೇ ತರಗತಿ | 3,000 | 4,000 |
| III. | 5 ರಿಂದ 8ನೇ ತರಗತಿ | 5,000 | 6,000 |
| IV. | 9 ಹಾಗೂ 10ನೇ ತರಗತಿ | 10,000 | 11,000 |
| V. | ಪ್ರಥಮ ಪಿಯುಸಿ ಮತ್ತು ದ್ವಿತೀಯ ಪಿ.ಯು.ಸಿ | 10,000 | 14,000 |
| VI. | ಐಟಿಐ | 12,000 | 15,000 |
| VII. | ಪದವಿ ಪ್ರತಿ ವರ್ಷಕ್ಕೆ | 15,000 | 20,000 |
| VIII. | ಸ್ನಾತಕೋತ್ತರ ಪದವಿ ಸೇರ್ಪಡೆಗೆ | 20,000 | 20,000 |
| | ಮತ್ತು ಪ್ರತಿ ವರ್ಷಕ್ಕೆ | 20,000 | 25,000 |

| IX. | ಇಂಜಿನಿಯರಿಂಗ್ ಕೋರ್ಸ್ ಬಿಇ/ ಬಿ.ಟೆಕ್ ಸೇರ್ಪಡೆಗೆ | 25,000 | 25,000 |
|---|---|---|---|
| | ಮತ್ತು ಪ್ರತಿ ವರ್ಷಕ್ಕೆ | 25,000 | 30,000 |
| X. | ವೈದ್ಯಕೀಯ ಕೋರ್ಸ್‌ಗೆ ಸೇರ್ಪಡೆಗೆ | 30,000 | 30,000 |
| | ಮತ್ತು ಪ್ರತಿ ವರ್ಷಕ್ಕೆ | 40,000 | 50,000 |
| XI. | ಡಿಪ್ಲೋಮಾ | 15,000 | 20,000 |
| XII. | ಎಂ.ಟೆಕ್ / ಎಂ.ಇ | 30,000 | 35,000 |
| XIII. | ಎಂ.ಡಿ (ವೈದ್ಯಕೀಯ) | 45,000 | 55,000 |
| XIV. | ಪಿಹೆಚ್‌ಡಿ (ಪ್ರತಿ ವರ್ಷಕ್ಕೆ) ಗರಿಷ್ಠ 03 ವರ್ಷ | 25,000 | 30,000 |

12. **ವೈದ್ಯಕೀಯ ಸಹಾಯಧನ (ಕಾರ್ಮಿಕ ಆರೋಗ್ಯ ಭಾಗ್ಯ):** ನೋಂದಾಯಿತ ಫಲಾನುಭವಿ ಹಾಗೂ ಅವರ ಅವಲಂಭಿತರಿಗೆ **ರೂ.300/-** ರಿಂದ **ರೂ.10,000/-**ವರೆಗೆ
13. **ಅಪಘಾತ ಪರಿಹಾರ:** ಮರಣ ಹೊಂದಿದ್ದಲ್ಲಿ **ರೂ.5,00,000/-**, ಸಂಪೂರ್ಣ ಶಾಶ್ವತ ದುರ್ಬಲತೆಯಾದಲ್ಲಿ **ರೂ.2,00,000/-** ಮತ್ತು ಭಾಗಶಃ ಶಾಶ್ವತ ದುರ್ಬಲತೆಯಾದಲ್ಲಿ **ರೂ.1,00,000/-**
14. **ಪ್ರಮುಖ ವೈದ್ಯಕೀಯ ವೆಚ್ಚ ಸಹಾಯಧನ (ಕಾರ್ಮಿಕ ಚಿಕಿತ್ಸಾ ಭಾಗ್ಯ):** ಹೃದ್ರೋಗ, ಕಿಡ್ನಿ ಜೋಡಣೆ, ಕ್ಯಾನ್ಸರ್ ಶಸ್ತ್ರಚಿಕಿತ್ಸೆ, ಕಣ್ಣಿನ ಶಸ್ತ್ರಚಿಕಿತ್ಸೆ, ಪಾರ್ಶ್ವವಾಯು, ಮೂಳೆ ಶಸ್ತ್ರಚಿಕಿತ್ಸೆ, ಗರ್ಭಕೋಶ ಶಸ್ತ್ರಚಿಕಿತ್ಸೆ, ಅಸ್ತಮ ಚಿಕಿತ್ಸೆ, ಗರ್ಭಪಾತ ಪ್ರಕರಣಗಳು, ಪಿತ್ತಕೋಶದ ತೊಂದರೆಗೆ ಸಂಬಂಧಿತ ಚಿಕಿತ್ಸೆ, ಮೂತ್ರ ಪಿಂಡದಲ್ಲಿನ ಕಲ್ಲು ತೆಗೆಯುವ ಚಿಕಿತ್ಸೆ, ಮೆದುಳಿನ ರಕ್ತಸ್ರಾವದ ಚಿಕಿತ್ಸೆ, ಅಲ್ಸರ್ ಚಿಕಿತ್ಸೆ, ಡಯಾಲಿಸಿಸ್ ಚಿಕಿತ್ಸೆ, ಕಿಡ್ನಿ ಶಸ್ತ್ರಚಿಕಿತ್ಸೆ, ಇ.ಎನ್.ಟಿ. ಚಿಕಿತ್ಸೆ ಮತ್ತು ಶಸ್ತ್ರಚಿಕಿತ್ಸೆ, ನರರೋಗ ಶಸ್ತ್ರಚಿಕಿತ್ಸೆ, ವ್ಯಾಸ್ಕ್ಯೂಲರ್ ಶಸ್ತ್ರಚಿಕಿತ್ಸೆ, ಅನ್ನನಾಳದ ಚಿಕಿತ್ಸೆ ಮತ್ತು ಶಸ್ತ್ರಚಿಕಿತ್ಸೆ, ಕರುಳಿನ ಶಸ್ತ್ರಚಿಕಿತ್ಸೆ, ಸ್ತನ ಸಂಬಂಧಿತ ಚಿಕಿತ್ಸೆ ಮತ್ತು ಶಸ್ತ್ರಚಿಕಿತ್ಸೆ, ಹರ್ನಿಯ ಶಸ್ತ್ರಚಿಕಿತ್ಸೆ, ಅಪೆಂಡಿಕ್ಸ್ ಶಸ್ತ್ರಚಿಕಿತ್ಸೆ, ಮೂಳೆ ಮುರಿತ/ಡಿಸ್‌ಲೊಕೇಶನ್ ಚಿಕಿತ್ಸೆ, ಇತರೆ ಔದ್ಯೋಗಿಕ ಖಾಯಿಲೆಗಳ ಚಿಕಿತ್ಸೆಗಳಿಗೆ **ರೂ.2,00,000/-**ವರೆಗೆ
15. **ಮದುವೆ ಸಹಾಯಧನ (ಗೃಹ ಲಕ್ಷ್ಮೀ ಬಾಂಡ್):** ಫಲಾನುಭವಿ ಅಥವಾ ಅವರ ಇಬ್ಬರು ಮಕ್ಕಳ ಮದುವೆಗೆ ತಲಾ **ರೂ.50,000/-**
16. **ಐಕಲು ಸಂಪರ್ಕ ಸೌಲಭ್ಯ (ಕಾರ್ಮಿಕ ಅನಿಲ ಭಾಗ್ಯ):** ಅನಿಲ ಸಂಪರ್ಕದೊಂದಿಗೆಎರಡು ಬರ್ನರ್ ಸ್ಟೌವ್
17. **ಬಿಎಂಟಿಸಿ ಬಸ್ ಪಾಸ್ ಸೌಲಭ್ಯ:** ಬೆಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಯಲ್ಲಿ ಕೆಲಸ ಮಾಡುತ್ತಿರುವಂತಹ / ವಾಸಸ್ಥಳದಿಂದ ಬೆಂಗಳೂರಿಗೆ ಪ್ರಯಾಣಿಸುವ ನೋಂದಾಯಿತ ಕಟ್ಟಡ ಕಾರ್ಮಿಕರಿಗೆ
18. **ಕೆಎಸ್‌ಆರ್‌ಟಿಸಿ ಬಸ್ ಪಾಸ್‌ನ ಸೌಲಭ್ಯ:** ರಾಜ್ಯದಾದ್ಯಂತ ವಿದ್ಯಾಭ್ಯಾಸದಲ್ಲಿ ತೊಡಗಿರುವ ನೋಂದಾಯಿತ ಕಾರ್ಮಿಕರ ಇಬ್ಬರು ಮಕ್ಕಳಿಗೆ (ಈ ಯೋಜನೆಯನ್ನು ಜಾರಿಗೊಳಿಸಲಾಗುತ್ತಿದೆ)
19. **ತಾಯಿ ಮಗು ಸಹಾಯ ಹಸ್ತ:** ಮಹಿಳಾ ಫಲಾನುಭವಿಯು ಮಗುವಿಗೆ ಜನ್ಮ ನೀಡಿದ ಸಂದರ್ಭದಲ್ಲಿ ಆಕೆಯ ಮಗುವಿನ ಶಾಲಾ ಪೂರ್ವ ಶಿಕ್ಷಣ ಮತ್ತು ಪೌಷ್ಠಿಕತೆಗಾಗಿ ಮಗುವಿಗೆ ಮೂರು ವರ್ಷಗಳು ತುಂಬುವವರೆಗೆ ವಾರ್ಷಿಕ **ರೂ.6,000/-** ಗಳ ಸಹಾಯಧನ.

# ಅನುಬಂಧ-02

(ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 2780)

ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿಯ ವತಿಯಿಂದ ಕ್ಷೌರಿಕರು/ಅಗಸ ವೃತ್ತಿಯಲ್ಲಿ ತೊಡಗಿರುವ ಕಾರ್ಮಿಕರ ಅರ್ಜಿಗಳನ್ನು ಸ್ವೀಕರಿಸಲಾದ ತಾಲ್ಲುಕುವಾರು ಮಾಹಿತಿ (15-08-2020 ರವರೆಗೆ)

| ಜಿಲ್ಲೆ | ತಾಲ್ಲೂಕು | ಕ್ಷೌರಿಕ | ಅಗಸ | ಒಟ್ಟು | ತಲಾ |
|---|---|---|---|---|---|
| ಶಿವಮೊಗ್ಗ | ಭದ್ರಾವತಿ | 272 | 181 | 453 | 2265000 |
| | ಹೊಸನಗರ | 111 | 14 | 125 | 625000 |
| | ಸಾಗರ | 165 | 77 | 242 | 1210000 |
| | ಶಿಕಾರಿಪುರ | 166 | 108 | 274 | 1370000 |
| | ಶಿವಮೊಗ್ಗ | 422 | 259 | 681 | 3405000 |
| | ಸೋರಭ್ | 154 | 49 | 203 | 1015000 |
| | ತೀರ್ಥಹಳ್ಳೀ | 83 | 25 | 108 | 540000 |
| | ಒಟ್ಟು | 1373 | 713 | 2086 | 10430000 |

**ಕರ್ನಾಟಕ ಸರ್ಕಾರ**

ಸಂಖ್ಯೆ: ಕಾಇ 142 ಎಲ್‌ಇಟಿ 2021

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸಸೌಧ,
ಬೆಂಗಳೂರು, ದಿನಾಂಕ: /03/2021

**ಇವರಿಂದ:**
ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ,
ಕಾರ್ಮಿಕ ಇಲಾಖೆ,
ವಿಕಾಸಸೌಧ, ಬೆಂಗಳೂರು.

**ಇವರಿಗೆ:**
ಕಾರ್ಯದರ್ಶಿ,
ಕರ್ನಾಟಕ ವಿಧಾನ ಸಭೆ
ವಿಧಾನಸೌಧ, ಬೆಂಗಳೂರು.

ಮಾನ್ಯರೆ,

ವಿಷಯ: ಮಾನ್ಯ ವಿಧಾನ ಸಭೆಯ ಸದಸ್ಯರಾದ ಶ್ರೀ ಅನಿಲ್ ಚಿಕ್ಕಮಾದು (ಹೆಚ್.ಡಿ.ಕೋಟೆ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 3905ಕ್ಕೆ ಉತ್ತರ ಸಲ್ಲಿಸುವ ಕುರಿತು.

*******

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನ ಸಭೆಯ ಸದಸ್ಯರಾದ ಶ್ರೀ ಅನಿಲ್ ಚಿಕ್ಕಮಾದು (ಹೆಚ್.ಡಿ.ಕೋಟೆ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 3905ಕ್ಕೆ ಉತ್ತರದ 25 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಮುಂದಿನ ಸೂಕ್ತ ಕ್ರಮಕ್ಕಾಗಿ ತಮಗೆ ಕಳುಹಿಸಿಕೊಡಲು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮ ವಿಶ್ವಾಸಿ,

(ಪ್ರದೀಪ್ ಕುಮಾರ್ ಬಿ.ಎಸ್)
ಸರ್ಕಾರದ ಅಧೀನ ಕಾರ್ಯದರ್ಶಿ,
ಕಾರ್ಮಿಕ ಇಲಾಖೆ.

# ಕರ್ನಾಟಕ ವಿಧಾನ ಸಭೆ

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ 3905
2. ಮಾನ್ಯ ಸದಸ್ಯರ ಹೆಸರು ಶ್ರೀ ಅನಿಲ್ ಚಿಕ್ಕಮಾದು (ಹೆಚ್.ಡಿ.ಕೋಟೆ)
3. ಉತ್ತರಿಸಬೇಕಾದ ದಿನಾಂಕ 25/03/2021
4. ಉತ್ತರಿಸುವವರು ಮಾನ್ಯ ಕಾರ್ಮಿಕ ಸಚಿವರು

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿರುವ ಕಟ್ಟಡ ಹಾಗೂ ಇತರೆ ನಿರ್ಮಾಣದ ನೋಂದಾಯಿತ ಕಾರ್ಮಿಕರ ಸಂಖ್ಯೆ ಎಷ್ಟು; (ತಾಲ್ಲೂಕುವಾರು, ಕಾರ್ಮಿಕರ ಹೆಸರು ಮತ್ತು ವಿವರವನ್ನು ಒದಗಿಸುವುದು) | ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿಯಲ್ಲಿ ಇದುವರೆಗೂ 29.59 ಲಕ್ಷ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರನ್ನು ನೋಂದಣಿ ಮಾಡಲಾಗಿದೆ. ತಂತ್ರಾಂಶದ ಮೂಲಕ ನೋಂದಣಿಯಾಗಿರುವ 20.61 ಲಕ್ಷ ಕಾರ್ಮಿಕರ ಹೆಸರು ಮತ್ತು ವಿವರಗಳ ಮಾಹಿತಿಯನ್ನು ಸಿಡಿಯ ಮೂಲಕ ಒದಗಿಸಿದೆ. ನೋಂದಣಿಯಾದ ಕಾರ್ಮಿಕರ ತಾಲ್ಲೂಕುವಾರು / ವೃತ್ತವಾರು ಸಂಖ್ಯೆಯನ್ನು **ಅನುಬಂಧ-1ರಲ್ಲಿ** ನೀಡಿದೆ. |
| ಆ) | ಕೋವಿಡ್-19ರ ಹಿನ್ನಲೆಯಲ್ಲಿ 2020-21ನೇ ಸಾಲಿನಲ್ಲಿ ಎಷ್ಟು ಜನ ಕಾರ್ಮಿಕರಿಗೆ ಯಾವ ಯಾವ ಕಿಟ್‌ಗಳನ್ನು ವಿತರಿಸಲಾಗಿದೆ; (ಜಿಲ್ಲಾವಾರು, ವಿಧಾನಸಭಾ ಕ್ಷೇತ್ರವಾರು, ಫಲಾನುಭವಿಗಳ ವಿವರವನ್ನು ಒದಗಿಸುವುದು) | ಕೋವಿಡ್-19ರ ಹಿನ್ನಲೆಯಲ್ಲಿ 2020-21ನೇ ಸಾಲಿನಲ್ಲಿ 7,15,000 ಕಾರ್ಮಿಕರಿಗೆ ಆಹಾರ ಸಾಮಾಗ್ರಿಗಳ ಕಿಟ್‌ಗಳನ್ನು ವಿತರಿಸಲಾಗಿದೆ. ಸದರಿ ಕಿಟ್ ವಿತರಣೆಯ ಜಿಲ್ಲಾವಾರು ಮತ್ತು ವಿಧಾನಸಭಾ ಕ್ಷೇತ್ರವಾರು / ತಾಲ್ಲೂಕುವಾರು / ವಲಯವಾರು ಸಂಖ್ಯೆಯನ್ನು **ಅನುಬಂಧ-2 ರಲ್ಲಿ** ನೀಡಿದೆ. ಕೊರೋನಾ ವೈರಸ್ ಸಂದರ್ಭದಲ್ಲಿ ತುರ್ತಾಗಿ ಅವಶ್ಯಕತೆಗನುಗುಣವಾಗಿ ಕಿಟ್‌ಗಳನ್ನು ವಿತರಣೆ ಮಾಡಿರುವುದರಿಂದ ಸಂಪೂರ್ಣವಾಗಿ ಫಲಾನುಭವಿಗಳ ವಿವರಗಳನ್ನು ಪಡೆಯಲು ಸಾಧ್ಯವಾಗಿರುವುದಿಲ್ಲ. |
| ಇ) | ಅನೇಕ ಜಿಲ್ಲೆಗಳಿಗೆ ಕಿಟ್‌ಗಳನ್ನು ವಿತರಿಸದೇ ತಾರತಮ್ಯವಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ, ಹಾಗಿದ್ದಲ್ಲಿ ಸರ್ಕಾರ ಆ ಬಗ್ಗೆ ಕೈಗೊಂಡ ಕ್ರಮಗಳೇನು; (ವಿವರ ನೀಡುವುದು) | ಕೋವಿಡ್-19 ಸಂದರ್ಭದಲ್ಲಿ ಆಹಾರ ಸಾಮಾಗ್ರಿಗಳ ಕಿಟ್‌ಗಳ ಪೂರೈಕೆಗೆ ಸಂಬಂಧಪಟ್ಟಂತೆ ಬಂದ ಬೇಡಿಕೆಗಳ ಅನುಗುಣವಾಗಿ ಆಧ್ಯತೆ ಮೇರೆಗೆ ಕಿಟ್‌ಗಳನ್ನು ವಿತರಣೆ ಮಾಡಲಾಗಿರುತ್ತದೆ. |
| ಈ) | ಕಿಟ್ ವಿತರಣೆ ಅಕ್ರಮಗಳ ಬಗ್ಗೆ ದೂರುಗಳು ಬಂದಿವೆಯೇ; (ವಿವರ ನೀಡುವುದು) | ಕೋವಿಡ್-19 ರ ಲಾಕ್‌ಡೌನ್ ಸಂದರ್ಭದಲ್ಲಿ ಆಹಾರ ಸಾಮಾಗ್ರಿಗಳನ್ನು ಕಾರ್ಮಿಕ ಇಲಾಖೆ ವತಿಯಿಂದ ವಿತರಿಸಲಾಗುತ್ತಿದ್ದು ಸದರಿ ಅವಧಿಯಲ್ಲಿ ಆಹಾರ ಧಾನ್ಯಗಳ ಕಿಟ್‌ಗಳನ್ನು ಅಕ್ರಮವಾಗಿ ಮೆ॥ ಲೋಟಸ್ ಕನ್ವೆನ್ಷನ್ ಹಾಲ್, ಟಿ.ಸಿ.ಪಾಳ್ಯ ಮುಖ್ಯರಸ್ತೆ, ರಾಮಮೂರ್ತಿನಗರ, ಬೆಂಗಳೂರು ಇಲ್ಲಿ ಶೇಖರಿಸಿ ಇಡಲಾಗಿರುವುದು ಕಂಡುಬಂದಿದ್ದು, ಈ ಬಗ್ಗೆ ದೂರನ್ನು ಕಾರ್ಮಿಕ ಇಲಾಖೆಯಿಂದ ರಾಮಮೂರ್ತಿನಗರ ಪೊಲೀಸ್ ಠಾಣೆ, ಬೆಂಗಳೂರು ಇಲ್ಲಿ ದೂರು ದಾಖಲು ಮಾಡಲಾಗಿರುತ್ತದೆ. ಸದರಿ ದೂರಿನ ಅಪರಾಧ ಸಂಖ್ಯೆ: 0186/2020, ದಿನಾಂಕ:21-05-2020 ಆಗಿರುತ್ತದೆ. ಸದರಿ ಪ್ರಕರಣವು ವಿಚಾರಣಾ ಹಂತದಲ್ಲಿರುತ್ತದೆ. |
| ಉ) | ದೂರುಗಳ ಬಗ್ಗೆ ಸರ್ಕಾರ ಕೈಗೊಂಡ ಕ್ರಮಗಳೇನು; (ವಿವರ ನೀಡುವುದು) | |

| | | |
|---|---|---|
| ಊ) | ಕಿಟ್ ಖರೀದಿಸಲು ಸರ್ಕಾರದಿಂದ ಬಿಡುಗಡೆಯಾದ ಅನುದಾನವೆಷ್ಟು; ಎಷ್ಟು ಕಿಟ್‌ಗಳನ್ನುಖರೀದಿಸಲಾಗಿದೆ; | ಕಿಟ್‌ಗಳ ಖರೀದಿಗೆ ಸರ್ಕಾರದಿಂದ ಯಾವುದೇ ಅನುದಾನ ಬಿಡುಗಡೆಯಾಗಿರುವುದಿಲ್ಲ. ಆದರೆ, ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿಯ ಕಟ್ಟಡ ಕಾರ್ಮಿಕರ ಕಲ್ಯಾಣ ಸುಂಕ ನಿಧಿಯಿಂದ ಭರಿಸಲಾಗಿರುತ್ತದೆ. 7,15,000 ಆಹಾರ ಸಾಮಾಗ್ರಿಗಳ ಕಿಟ್‌ಗಳನ್ನು ಮಂಡಳಿಯಿಂದ ಖರೀದಿಸಲಾಗಿರುತ್ತದೆ. |
| ಋ) | ಪ್ರತಿ ಕಿಟ್‌ನ ಮೌಲ್ಯವೆಷ್ಟು; | ಪ್ರತಿ ಕಿಟ್‌ನ ಮೌಲ್ಯ ಪ್ರತಿಯೊಂದು ಸಂಸ್ಥೆಯ ಧರ ಹಾಗೂ ಸಾಮಾಗ್ರಿಗಳು ಮತ್ತು ಪ್ರಮಾಣ ಭಿನ್ನವಾಗಿದ್ದು, ಪ್ರತಿ ಕಿಟ್‌ನ ಮೌಲ್ಯ ಕನಿಷ್ಠ ರೂ. 290 ರಿಂದ ಗರಿಷ್ಠ ರೂ. 899 ಆಗಿರುತ್ತದೆ. |
| ಎ) | ಕಿಟ್ ಖರೀದಿಸುವ ಟೆಂಡರ್‌ಗಳನ್ನು ಯಾರಿಗೆ ನೀಡಲಾಗಿದೆ? (ಟೆಂಡರ್‌ದಾರರ ಕರಾರು ಪ್ರತಿಯೊಂದಿಗೆ ಸಂಪೂರ್ಣ ವಿವರ ನೀಡುವುದು) | ಸರ್ಕಾರದ ಆದೇಶ ಸಂಖ್ಯೆ: ಕಾಇ 136 ಎಲ್‌ಇಟಿ 2020 ದಿನಾಂಕ: 30-03-2020 ರನ್ವಯ ತಯಾರಿಸಿದ ಊಟ ಮತ್ತು ಆಹಾರ ಧಾನ್ಯಗಳ ಕಿಟ್ ವಿತರಣೆಗೆ ಕೆಟಿಪಿಪಿ ಅಧಿನಿಯಮ 1999 ರ ಕಲಂ 4(ಎ) ರಡಿ ವಿನಾಯಿತಿ ನೀಡಿರುತ್ತದೆ. ಅದರನ್ವಯ ಅರ್ಹ ಸಂಸ್ಥೆಗಳಿಂದ ನೇರವಾಗಿ ಕಿಟ್‌ಗಳನ್ನು ಖರೀದಿಸಲಾಗಿದ್ದು, ಕೆಟಿಪಿಪಿ ನಿಯಮಾನುಸಾರ ಟೆಂಡರ್ ಕರೆದಿರುವುದಿಲ್ಲ ಹಾಗೂ ಯಾವುದೇ ಸಂಸ್ಥೆಯೊಂದಿಗೆ ಕರಾರುಗಳನ್ನು ಮಾಡಿಕೊಂಡಿರುವುದಿಲ್ಲ. |

**ಕಾಇ 142 ಎಲ್‌ಇಟಿ 2021**

*(ಅರಬೈಲ್ ಶಿವರಾಂ ಹೆಬ್ಬಾರ್)*
**ಕಾರ್ಮಿಕ ಸಚಿವರು**

## ಅನುಬಂಧ-1

(ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 3905)

**2007** ರಿಂದ ಫೆಬ್ರವರಿ 2021 ರವರೆಗೆ ನೋಂದಣಿಯಾಗಿರುವ ಕಾರ್ಮಿಕರ ಜಿಲ್ಲೆ / ತಾಲ್ಲೂಕುವಾರು ವಿವರ

| ಕ್ರಮ ಸಂಖ್ಯೆ | ಜಿಲ್ಲೆ / ಉಪ ವಿಭಾಗ | ತಾಲ್ಲೂಕು / ವೃತ್ತ | ನೋಂದಣಿಯಾದ ಕಾರ್ಮಿಕರ ಸಂಖ್ಯೆ |
|---|---|---|---|
| 1 | ಕೋಲಾರ | ಕೋಲಾರ | 38864 |
| | | ಕೆಜಿಎಫ್ | 8550 |
| | | ಮುಳಬಾಗಲು | 27812 |
| | | ಮಾಲೂರು | 18368 |
| | | ಬಂಗಾರಪೇಟೆ | 14588 |
| | | ಒಟ್ಟು | 1,08,182 |
| 2 | ದಕ್ಷಿಣ ಕನ್ನಡ | ಮಂಗಳೂರು | 39905 |
| | | ಬಂಟ್ವಾಳ | 20112 |
| | | ಬೆಳ್ತಂಗಡಿ | 12343 |
| | | ಪುತ್ತೂರು | 12055 |
| | | ಒಟ್ಟು | 84,415 |
| 3 | ಚಿತ್ರದುರ್ಗ | ಚಿತ್ರದುರ್ಗ | 24405 |
| | | ಹೊಸದುರ್ಗ | 12503 |
| | | ಹೊಳಲ್ಕೆರೆ | 8333 |
| | | ಚಳ್ಳಕೆರೆ | 10529 |
| | | ಮೊಳಕಾಲ್ಮೂರು | 4631 |
| | | ಹಿರಿಯೂರು | 12782 |
| | | ಒಟ್ಟು | 73183 |
| 4 | ಕೊಪ್ಪಳ | ಕೊಪ್ಪಳ | 17987 |
| | | ಕುಷ್ಟಗಿ | 27757 |
| | | ಗಂಗಾವತಿ | 14870 |
| | | ಒಟ್ಟು | 60614 |
| 5 | ಬೆಳಗಾವಿ | ಬೆಳಗಾವಿ 1ನೇ | 6060 |
| | | ಬೆಳಗಾವಿ 2ನೇ | 6206 |
| | | ಗೋಕಾಕ | 14506 |
| | | ರಾಯಭಾಗ | 3488 |
| | | ನಿಪ್ಪಾಣಿ | 6283 |
| | | ಚಿಕ್ಕೋಡಿ | 7126 |
| | | ಹುಕ್ಕೇರಿ | 11732 |
| | | ಅಥಣಿ | 7741 |
| | | ಬೆಳಗಾವಿ 3ನೇ | 16726 |

| | | | |
|---|---|---|---|
| | | ಬೆಳಗಾವಿ 4ನೇ | 21384 |
| | | ಸವದತ್ತಿ | 12701 |
| | | ಬೈಲಹೊಂಗಲ | 24178 |
| | | ರಾಮದುರ್ಗ | 8575 |
| | | ಒಟ್ಟು | 146706 |
| 6 | ವಿಜಯಪುರ | ವಿಜಯಪುರ 1ನೇ | 9611 |
| | | ವಿಜಯಪುರ 2ನೇ | 25324 |
| | | ಸಿಂದಗಿ | 6994 |
| | | ಇಂಡಿ | 4324 |
| | | ಮುದ್ದೇಬಿಹಾಳ | 29073 |
| | | ಬಾಗೇವಾಡಿ | 13412 |
| | | ಒಟ್ಟು | 88738 |
| 7 | ಬಾಗಲಕೋಟೆ | ಬಾಗಲಕೋಟೆ | 25230 |
| | | ಬಾದಾಮಿ | 17248 |
| | | ಮುಧೋಳ | 7005 |
| | | ಹುನಗುಂದ | 12124 |
| | | ಜಮಖಂಡಿ | 12435 |
| | | ಒಟ್ಟು | 74042 |
| 8 | ಗದಗ | ಗದಗ | 2059 |
| | | ಗದಗ 1ನೇ | 11308 |
| | | ಗದಗ 2ನೇ | 3536 |
| | | ರೋಣ | 9482 |
| | | ಮುಂಡರಗಿ | 3388 |
| | | ಶಿರಹಟ್ಟಿ | 6459 |
| | | ನರಗುಂದ | 2826 |
| | | ಒಟ್ಟು | 39058 |
| 9 | ಹಾವೇರಿ | ಹಾವೇರಿ | 34305 |
| | | ರಾಣೇಬೆನ್ನೂರು | 32482 |
| | | ಬ್ಯಾಡಗಿ | 28680 |
| | | ಸವಣೂರ | 25306 |
| | | ಒಟ್ಟು | 120773 |
| 10 | ಧಾರವಾಡ | ಹುಬ್ಬಳ್ಳಿ 1ನೇ | 3064 |
| | | ಹುಬ್ಬಳ್ಳಿ 4ನೇ | 11122 |

|  |  | ಧಾರವಾಡ 1ನೇ | 16533 |
|---|---|---|---|
|  |  | ಹುಬ್ಬಳ್ಳಿ 2ನೇ | 10534 |
|  |  | ಹುಬ್ಬಳ್ಳಿ 3ನೇ | 11815 |
|  |  | ಕಲಘಟಗಿ | 15414 |
|  |  | ಧಾರವಾಡ 2ನೇ | 7625 |
|  |  | ಒಟ್ಟು | 76107 |
| 11 | ಕಾರವಾರ | ಕಾರವಾರ | 3743 |
|  |  | ಅಂಕೋಲಾ | 6206 |
|  |  | ಕುಮಟಾ | 13056 |
|  |  | ಹೊನ್ನಾವರ | 12115 |
|  |  | ಭಟ್ಕಳ | 13207 |
|  |  | ಶಿರಸಿ | 3357 |
|  |  | ಸಿದ್ದಾಪುರ | 2539 |
|  |  | ಯಲ್ಲಾಪುರ | 6142 |
|  |  | ಮುಂಡಗೋಡ | 7274 |
|  |  | ಹಳಿಯಾಳ | 17568 |
|  |  | ದಾಂಡೇಲಿ | 7962 |
|  |  | ಒಟ್ಟು | 93169 |
| 12 | ರಾಮನಗರ | ರಾಮನಗರ | 13672 |
|  |  | ಚೆನ್ನಪಟ್ಟಣ | 12546 |
|  |  | ಕನಕಪುರ | 20517 |
|  |  | ಮಾಗಡಿ | 7559 |
|  |  | ಒಟ್ಟು | 54294 |
| 13 | ಚಿಕ್ಕಮಗಳೂರು | ಚಿಕ್ಕಮಗಳೂರು | 832 |
|  |  | ಚಿಕ್ಕಮಗಳೂರು 1ನೇ | 11191 |
|  |  | ತರೀಕೆರೆ | 21164 |
|  |  | ಕೊಪ್ಪ | 3891 |
|  |  | ಚಿಕ್ಕಮಗಳೂರು | 929 |
|  |  | ಚಿಕ್ಕಮಗಳೂರು 2ನೇ | 11889 |
|  |  | ಮೂಡಿಗೆರೆ | 1499 |
|  |  | ಕಡೂರು | 13570 |
|  |  | ಒಟ್ಟು | 64965 |
| 14 | ಹಾಸನ | ಬೇಲೂರು | 4455 |

|  |  |  |  |
|---|---|---|---|
|  |  | ಸಕಲೇಶಪುರ | 1964 |
|  |  | ಆಲೂರು | 5183 |
|  |  | ಹಾಸನ | 19791 |
|  |  | ಹೊಳೆನರಸೀಪುರ | 4887 |
|  |  | ಚನ್ನರಾಯಪಟ್ಟಣ | 8320 |
|  |  | ಅರಸೀಕೆರೆ | 6631 |
|  |  | ಒಟ್ಟು | 55794 |
| 15 | ಕೊಡಗು | ಮಡಿಕೇರಿ | 1674 |
|  |  | ಸೋಮವಾರಪೇಟೆ | 1821 |
|  |  | ವಿರಾಜಪೇಟೆ | 3039 |
|  |  | ಒಟ್ಟು | 6534 |
| 16 | ಬೆಂಗಳೂರು-01 | ಬೆಂಗಳೂರು 1ನೇ | 10310 |
|  |  | ಬೆಂಗಳೂರು 2ನೇ | 8159 |
|  |  | ಬೆಂಗಳೂರು 10ನೇ | 5115 |
|  |  | ಬೆಂಗಳೂರು 25ನೇ | 7351 |
|  |  | ಬೆಂಗಳೂರು 27ನೇ | 4445 |
|  |  | ಬೆಂಗಳೂರು 30ನೇ | 12571 |
|  |  | ಬೆಂಗಳೂರು 45ನೇ | 5459 |
|  |  | ಬೆಂಗಳೂರು 47ನೇ | 3419 |
|  |  | ನೆಲಮಂಗಲ | 4015 |
|  |  | ಒಟ್ಟು | 60844 |
|  | ಬೆಂಗಳೂರು-02 | ಬೆಂಗಳೂರು 12ನೇ | 5348 |
|  |  | ಬೆಂಗಳೂರು 13ನೇ | 4670 |
|  |  | ಬೆಂಗಳೂರು 26ನೇ | 5994 |
|  |  | ಬೆಂಗಳೂರು 28ನೇ | 14083 |
|  |  | ಬೆಂಗಳೂರು 33ನೇ | 6103 |
|  |  | ಬೆಂಗಳೂರು 34ನೇ | 4008 |
|  |  | ಬೆಂಗಳೂರು 39ನೇ | 9319 |
|  |  | ಬೆಂಗಳೂರು 48ನೇ | 17933 |
|  |  | ಬೆಂಗಳೂರು 49ನೇ | 5657 |
|  |  | ಒಟ್ಟು | 73115 |
|  | ಬೆಂಗಳೂರು-3 | ಬೆಂಗಳೂರು | 11486 |
|  |  | ಬೆಂಗಳೂರು 05ನೇ | 29394 |
|  |  | ಬೆಂಗಳೂರು 15ನೇ | 18355 |
|  |  | ಬೆಂಗಳೂರು 23ನೇ | 2882 |

| | | | |
|---|---|---|---|
| | | ಬೆಂಗಳೂರು 29ನೇ | 12162 |
| | | ಬೆಂಗಳೂರು 36ನೇ | 8269 |
| | | ಬೆಂಗಳೂರು 42ನೇ | 3860 |
| | | ಬೆಂಗಳೂರು 43ನೇ | 2556 |
| | | ಬೆಂಗಳೂರು 44ನೇ | 21727 |
| | | ಬೆಂಗಳೂರು 46ನೇ | 8462 |
| | | ದೇವನಹಳ್ಳಿ | 11528 |
| | | ಒಟ್ಟು | 130681 |
| | ಬೆಂಗಳೂರು-4 | ಬೆಂಗಳೂರು 04ನೇ | 3360 |
| | | ಬೆಂಗಳೂರು 08ನೇ | 3548 |
| | | ಬೆಂಗಳೂರು 19ನೇ | 7122 |
| | | ಬೆಂಗಳೂರು 21ನೇ | 5295 |
| | | ಬೆಂಗಳೂರು 22ನೇ | 6896 |
| | | ಬೆಂಗಳೂರು 32ನೇ | 8839 |
| | | ಬೆಂಗಳೂರು 37ನೇ | 6492 |
| | | ಬೆಂಗಳೂರು 41ನೇ | 4913 |
| | | ಹೊಸಕೋಟೆ | 12980 |
| | | ಒಟ್ಟು | 59445 |
| | ಬೆಂಗಳೂರು-5 | ಬೆಂಗಳೂರು 3ನೇ | 5710 |
| | | ಬೆಂಗಳೂರು 6ನೇ | 5334 |
| | | ಬೆಂಗಳೂರು 7ನೇ | 7138 |
| | | ಬೆಂಗಳೂರು 16ನೇ | 8170 |
| | | ಬೆಂಗಳೂರು 20ನೇ | 673 |
| | | ಬೆಂಗಳೂರು 24ನೇ | 15710 |
| | | ಬೆಂಗಳೂರು 31ನೇ | 4044 |
| | | ಬೆಂಗಳೂರು 40ನೇ | 9991 |
| | | ದೊಡ್ಡಬಳ್ಳಾಪುರ | 8859 |
| | | ಒಟ್ಟು | 65629 |
| | ಬೆಂಗಳೂರು-6 | ಬೆಂಗಳೂರು 9ನೇ | 4104 |
| | | ಬೆಂಗಳೂರು 11ನೇ | 4386 |
| | | ಬೆಂಗಳೂರು 14ನೇ | 6628 |
| | | ಬೆಂಗಳೂರು 17ನೇ | 7808 |
| | | ಬೆಂಗಳೂರು 18ನೇ | 21319 |
| | | ಬೆಂಗಳೂರು 35ನೇ | 3439 |

| | | | |
|---|---|---|---|
| | | ಬೆಂಗಳೂರು 38ನೇ | 15546 |
| | | ಆನೇಕಲ್ | 14340 |
| | | ಒಟ್ಟು | 77570 |
| 17 | ಉಡುಪಿ | ಉಡುಪಿ 1ನೇ | 10585 |
| | | ಉಡುಪಿ 2ನೇ | 11326 |
| | | ಕಾರ್ಕಳ | 8902 |
| | | ಕುಂದಾಪುರ | 16926 |
| | | ಒಟ್ಟು | 47739 |
| 18 | ಮೈಸೂರು | ಮೈಸೂರು 1ನೇ | 3560 |
| | | ಮೈಸೂರು 2ನೇ | 14252 |
| | | ಮೈಸೂರು 3ನೇ | 8992 |
| | | ಮೈಸೂರು 4ನೇ | 7811 |
| | | ನಂಜನಗೂಡು | 7292 |
| | | ಪಿರಿಯಾಪಟ್ಟಣ | 8114 |
| | | ಹುಣಸೂರು | 8104 |
| | | ಹೆಚ್.ಡಿ. ಕೋಟೆ | 7525 |
| | | ಕೆ.ಆರ್. ನಗರ | 8578 |
| | | ತಿ.ನ.ಪುರ | 5464 |
| | | ಒಟ್ಟು | 94205 |
| 19 | ಚಾಮರಾಜನಗರ | ಚಾಮರಾಜನಗರ | 16954 |
| | | ಕೊಳ್ಳೇಗಾಲ | 18269 |
| | | ಗುಂಡ್ಲುಪೇಟೆ | 6342 |
| | | ಒಟ್ಟು | 41565 |
| 20 | ಬೀದರ್ | ಬೀದರ್ | 64671 |
| | | ಔರಾದ | 17949 |
| | | ಬಾಲ್ಕಿ | 23998 |
| | | ಹುಮನಬಾದ್ | 13305 |
| | | ಬಸವಕಲ್ಯಾಣ | 24185 |
| | | ಒಟ್ಟು | 144108 |
| 21 | ಬಳ್ಳಾರಿ-1 &2 | ಬಳ್ಳಾರಿ-1 & 2ನೇ | 29688 |
| | | ಹೊಸಪೇಟೆ 1 &2ನೇ | 10827 |
| | | ಸಿರಗುಪ್ಪ | 10589 |
| | | ಹಡಗಲಿ | 7988 |
| | | ಸಂಡೂರು | 3875 |

|  |  |  |  |
|---|---|---|---|
|  |  | ಹೆಚ್.ಬಿ. ಹಳ್ಳಿ | 4980 |
|  |  | ಕೂಡ್ಲಿಗಿ | 8609 |
|  |  | ಒಟ್ಟು | 76556 |
| 22 | ಚಿಕ್ಕಬಳ್ಳಾಪುರ | ಚಿಕ್ಕಬಳ್ಳಾಪುರ | 9732 |
|  |  | ಚಿಂತಾಮಣಿ | 5224 |
|  |  | ಶಿಡ್ಲಘಟ್ಟ | 6382 |
|  |  | ಗೌರಿಬಿದನೂರು | 9648 |
|  |  | ಬಾಗೇಪಲ್ಲಿ | 5431 |
|  |  | ಒಟ್ಟು | 36417 |
| 23 | ಶಿವಮೊಗ್ಗ | ಶಿವಮೊಗ್ಗ | 3960 |
|  |  | ಶಿವಮೊಗ್ಗ 1ನೇ | 18037 |
|  |  | ಶಿವಮೊಗ್ಗ 2ನೇ | 12701 |
|  |  | ಭದ್ರಾವತಿ 1ನೇ | 5226 |
|  |  | ಭದ್ರಾವತಿ 2ನೇ | 9311 |
|  |  | ಸಾಗರ | 13326 |
|  |  | ಸೊರಬ | 10181 |
|  |  | ಹೊಸನಗರ | 3586 |
|  |  | ತೀರ್ಥಹಳ್ಳಿ | 5585 |
|  |  | ಶಿಕಾರಿಪುರ | 13741 |
|  |  | ಒಟ್ಟು | 101576 |
| 24 | ದಾವಣಗೆರೆ | ದಾವಣಗೆರೆ | 50500 |
|  |  | ಹರಿಹರ | 16339 |
|  |  | ಹರಪನಹಳ್ಳಿ | 15699 |
|  |  | ಚನ್ನಗಿರಿ | 10582 |
|  |  | ಹೊನ್ನಾಳಿ | 8844 |
|  |  | ಜಗಳೂರು | 8423 |
|  |  | ಒಟ್ಟು | 110387 |
| 25 | ಮಂಡ್ಯ-1&2 | ಮಂಡ್ಯ | 11638 |
|  |  | ಮದ್ದೂರು | 6085 |
|  |  | ಕೆ.ಆರ್.ಪೇಟೆ | 5851 |
|  |  | ನಾಗಮಂಗಲ | 1914 |
|  |  | 3233 | 4620 |
|  |  | ಶ್ರೀರಂಗಪಟ್ಟಣ | 4564 |

| | | | |
|---|---|---|---|
| | | ಒಟ್ಟು | 41759 |
| 26 | ಯಾದಗಿರಿ | ಯಾದಗಿರಿ | 27960 |
| | | ಶಹಪೂರ | 12581 |
| | | ಸುರಪುರ | 19697 |
| | | ಒಟ್ಟು | 60238 |
| 27 | ತುಮಕೂರು | ತುಮಕೂರು | 4317 |
| | | ತುಮಕೂರು 1ನೇ | 13261 |
| | | ತುಮಕೂರು 2ನೇ | 3724 |
| | | ಶಿರಾ | 8831 |
| | | ಮಧುಗಿರಿ | 11313 |
| | | ಕುಣಿಗಲ್ | 11511 |
| | | ತುರುವೆಕೆರೆ | 4505 |
| | | ಗುಬ್ಬಿ | 8847 |
| | | ಚಿ.ನಾ.ಹಳ್ಳಿ | 4199 |
| | | ತಿಪಟೂರು | 6065 |
| | | ಪಾವಗಡ | 10362 |
| | | ಒಟ್ಟು | 86935 |
| 28 | ಕಲಬುರಗಿ | ಕಲಬುರಗಿ | 58941 |
| | | ಆಳಂದ | 26141 |
| | | ಅಫಜಲಪೂರ | 6533 |
| | | ಚಿಂಚೋಳಿ | 3901 |
| | | ಸೇಡಂ | 7863 |
| | | ಚಿತ್ತಾಪೂರ | 8204 |
| | | ಜೇವರ್ಗಿ | 12431 |
| | | ಒಟ್ಟು | 124914 |
| 29 | ರಾಯಚೂರು | ರಾಯಚೂರು | 21250 |
| | | ಮಾನ್ವಿ | 4121 |
| | | ದೇವದುರ್ಗ | 2264 |
| | | ಸಿರವಾರ | 1326 |
| | | ಸಿಂಧನೂರು | 2108 |
| | | ಲಿಂಗಸ್ಗೂರು | 3724 |
| | | ಮಸ್ಕಿ | 522 |
| | | ಒಟ್ಟು | 40315 |

# ಅನುಬಂಧ-2

(ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 3905)

ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿಯಿಂದ ಪೂರೈಸಲಾದ ಫುಡ್ ಕಿಟ್‌ಗಳ ಜಿಲ್ಲಾವಾರು ವಿವರ

| ಕ್ರ.ಸಂ | ಜಿಲ್ಲೆಯ ಹೆಸರು | ಹಂಚಿಕೆ ಮಾಡಲಾಗಿರುವ ಫುಡ್ ಕಿಟ್‌ಗಳ ಸಂಖ್ಯೆ |
|---|---|---|
| 1 | ಬೆಂಗಳೂರು ನಗರ | 3,13,348 |
| 2 | ಬಿ.ಬಿ.ಎಂ.ಪಿ | 79,519 |
| 3 | ಬೆಂಗಳೂರು ಗ್ರಾಮಾಂತರ | 14,935 |
| 4 | ರಾಮನಗರ | 19,000 |
| 5 | ಚಿಕ್ಕಬಳ್ಳಾಪುರ | 7,000 |
| 6 | ಕೋಲಾರ | 3,025 |
| 7 | ತುಮಕೂರು | 22,375 |
| 8 | ಮಂಡ್ಯ | 8,798 |
| 9 | ಹಾಸನ | 27,000 |
| 10 | ಉಡುಪಿ | 5,000 |
| 11 | ಕಲಬುರಗಿ | 17,000 |
| 12 | ಚಿತ್ರದುರ್ಗ | 10,000 |
| 13 | ಕೊಪ್ಪಳ | 12,000 |
| 14 | ಹಾವೇರಿ | 30,500 |
| 15 | ಉತ್ತರ ಕನ್ನಡ | 24,000 |
| 16 | ಹುಬ್ಬಳ್ಳಿ - ಧಾರವಾಡ | 27,500 |
| 17 | ದಾವಣಗೆರೆ | 5000 |
| 18 | ಬೆಳಗಾವಿ | 62,000 |
| 19 | ಚಾಮರಾಜನಗರ | 5,000 |
| 20 | ಬೀದರ್ | 4,000 |
| 21 | ಯಾದಗಿರಿ | 3,000 |
| 22 | ರಾಯಚೂರು | 3,000 |
| 23 | ಗದಗ | 12,000 |
| | ಒಟ್ಟು | **7,15,000** |

## ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿಯಿಂದ ಪೂರೈಸಲಾದ ಘುಡ್ ಕಿಟ್‌ಗಳ ತಾಲ್ಲೂಕುವಾರು / ವಲಯವಾರು ವಿವರ

| ಕ್ರ.ಸಂ | ವಿತರಿಸಿದ ಸ್ಥಳಗಳ ವಿವರ | ವಿತರಿಸಿದ ಕಿಟ್‌ಗಳ ಸಂಖ್ಯೆ |
|---|---|---|
| | ಬೆಂಗಳೂರು ನಗರ | |
| | ಬಿಬಿಎಂಪಿ | |
| 01 | 01-ಕೆಂಪೇಗೌಡ | 1663 |
| 02 | 02-ಚೌಡೇಶ್ವರಿ | 1045 |
| 03 | 03-ಅಟ್ಟೂರು | 1800 |
| 04 | 04-ಯಲಹಂಕ ನ್ಯೂ ಟೌನ್ | 1805 |
| 05 | 05-ಜಕ್ಕೂರು | 2290 |
| 06 | 06-ತಿಣ್ಣಿಸಂದ್ರ | 1050 |
| 07 | 07-ಬ್ಯಾಟರಾಯನಪುರ | 1160 |
| 08 | 08-ಕೋಡಿಗೆ ಹಳ್ಳಿ | 2313 |
| 09 | 09-ವಿದ್ಯಾರಣ್ಯಪುರ | 457 |
| 10 | 10-ದೊಡ್ಡಬೊಮ್ಮಸಂದ್ರ | 500 |
| 11 | 11-ಕುವೆಂಪುನಗರ | 152 |
| 12 | 12-ಶೆಟ್ಟಿಹಳ್ಳಿ | 950 |
| 13 | 13-ಮಲ್ಲಸಂದ್ರ | 400 |
| 14 | 14-ಬಗಲಗುಂಟೆ | 1000 |
| 15 | 15-ಟಿ.ದಾಸರಹಳ್ಳಿ | 600 |
| 16 | 16-ಜಾಲಹಳ್ಳಿ | 35 |
| 17 | 18-ರಾಧಕೃಷ್ಣನಗರ | 550 |
| 18 | 19-ಸಂಜಯ್ ನಗರ | 411 |
| 19 | 20-ಗಂಗಾ ನಗರ | 463 |
| 20 | 21-ಹೆಬ್ಬಾಳ | 1230 |
| 21 | 22-ವಿ ನಾಗೇನಹಳ್ಳಿ | 1700 |
| 22 | 23-ನಾಗವಾರ | 1350 |
| 23 | 24-ಹೆಚ್‌ಬಿಆರ್ ಲೇಔಟ್ | 800 |
| 24 | 25-ಹೊರಮಾವು | 5026 |
| 25 | 26-ರಾಮಮೂರ್ತಿನಗರ | 1534 |
| 26 | 27-ಬನಸವಾಡಿ | 350 |
| 27 | 28-ಕಮ್ಮನಹಳ್ಳಿ | 350 |
| 28 | 29-ಕಚರಕನ ಹಳ್ಳಿ | 350 |
| 29 | 30-ಕಾಡುಗೊಂಡನಹಳ್ಳಿ | 750 |
| 30 | 31-ಕುಶಾಲ್ ನಗರ | 800 |
| 31 | 32-ಕಾವಲ್ ಬೈರ ಸಂದ್ರ | 800 |
| 32 | 33-ಮನೋರಾಯನ ಪಾಳ್ಯ | 3900 |
| 33 | 34-ಗಂಗೇನ ಹಳ್ಳಿ | 500 |
| 34 | 35-ಅರಮನೆ ನಗರ | 604 |
| 35 | 36-ಮತ್ತಿಕೆರೆ | 600 |
| 36 | 37- ಯಶವಂತಪುರ | 1385 |
| 37 | 39- ಚೊಕ್ಕಸಂದ್ರ | 660 |
| 38 | 40-ದೊಡ್ಡಬಿದರೆ ಕಲ್ಲು | 1550 |

| 39 | 41-ಪೀಣ್ಯ | 1363 |
|---|---|---|
| 40 | 43-ನಂದಿನಿ ಲೇಔಟ್ | 1130 |
| 41 | 44-ಮರಪ್ಪನಪಾಳ್ಯ | 325 |
| 42 | 45-ಮಲ್ಲೇಶ್ವರಂ | 550 |
| 43 | 46-ಜಯ ಚಾಮರಾಜೇಂದ್ರ ನಗರ | 300 |
| 44 | 47-ದೇವರಜೀವನಹಳ್ಳಿ | 100 |
| 45 | 49-ಲಿಂಗರಾಜಪುರಂ | 1000 |
| 46 | 50-ಬಿನ್ನಿಗಾನಹಳ್ಳಿ | 1500 |
| 47 | 51-ವಿಜಿನಾಪುರ | 1373 |
| 48 | 52-ಕೆ.ಆರ್ ಪುರಂ | 380 |
| 49 | 54-ಹೂಡಿ | 1525 |
| 50 | 55-ದೇವಸಂದ್ರ | 1250 |
| 51 | 56-ದೇವಸಂದ್ರ | 300 |
| 52 | 57-ಸಿ.ವಿ ರಾಮನ್ ನಗರ | 366 |
| 53 | 59-ಮಾರುತಿ ಸೇವಾ ನಗರ | 850 |
| 54 | 60-ಸಗಯ ಪುರಂ | 1500 |
| 55 | 61-ಎಸ್ ಕೆ ಗಾರ್ಡನ್ | 600 |
| 56 | 63-ಜಯಮಹಲ್ | 200 |
| 57 | 64-ರಾಜಮಹಲ್ | 303 |
| 58 | 65-ಕಾಡು ಮಲ್ಲೇಶ್ವರ | 550 |
| 59 | 66-ಸುಬ್ರಹ್ಮಣ್ಯಾ ನಗರ | 500 |
| 60 | 67-ನಾಗಪುರ | 310 |
| 61 | 68-ಮಹಾಲಕ್ಷ್ಮೀಪುರಂ | 940 |
| 62 | 69-ಲಗ್ಗೆರೆ | 1284 |
| 63 | 70-ರಾಜಗೋಪಲ್‌ನಗರ | 400 |
| 64 | 71-ಹೆಗ್ಗನಹಳ್ಳಿ | 700 |
| 65 | 72-ಹೆರೋಹಳ್ಳಿ | 1950 |
| 66 | 73-ಕೊಟ್ಟಿಗೆಪಾಳ್ಯ | 657 |
| 67 | 74-ಶಕ್ತಿ ಗಣಪತಿ ನಗರ | 990 |
| 68 | 75-ಶಂಕರ್ ಮಠ | 885 |
| 69 | 76-ಗಾಯಿತ್ರಿ ನಗರ | 430 |
| 70 | 77-ದತ್ತಾತ್ರೇಯ ನಗರ | 656 |
| 71 | 78-ಪುಲಿಕೇಶಿನಗರ | 300 |
| 72 | 79-ಸರ್ವಾಂಗಣ ನಗರ | 150 |
| 73 | 82-ಗರುಡಚಾರ್ ಪಾಳ್ಯ | 6161 |
| 74 | 83-ಕಾಡುಗೋಡಿ | 307 |
| 75 | 84-ಹಗದೂರು | 1431 |
| 76 | 86-ಮಾರತಹಳ್ಳಿ | 2775 |
| 77 | 87-ಹೆಚ್‌ಎಎಲ್ | 560 |
| 78 | 88-ಜೀವನ್ ಬೀಮಾ ನಗರ | 268 |
| 79 | 89-ಜೋಗ ಪಾಳ್ಯ | 823 |
| 80 | 90-ಹಲಸೂರು | 1133 |
| 81 | 91-ಭಾರತಿನಗರ | 282 |
| 82 | 92-ಶಿವಜಿನಗರ | 627 |
| 83 | 93-ವಸಂತನಗರ | 80 |
| 84 | 94-ಗಾಂಧಿನಗರ | 739 |

| | | |
|---|---|---|
| 85 | 95-ಸುಭಾಷ್ ನಗರ | 610 |
| 86 | 96-ಓಕಳಿಪುರಂ | 1120 |
| 87 | 97-ದಯಾನಂದ ನಗರ | 750 |
| 88 | 98-ಪ್ರಕಾಶ್ ನಗರ | 950 |
| 89 | 99-ರಾಜಾಜಿನಗರ | 2100 |
| 90 | 100-ಬಸವೇಶ್ವರ ನಗರ | 1050 |
| 91 | 102-ವೃಷಭವತಿ ನಗರ | 875 |
| 92 | 101-ಕಾಮಾಕ್ಷಿಪಾಳ್ಯ | 812 |
| 93 | 103-ಕಾವೇರಿಪುರ | 1390 |
| 94 | 104-ಗೋವಿಂದರಾಜ ನಗರ | 550 |
| 95 | 105-ಅಗ್ರಹಾರ ದಾಸರಹಳ್ಳಿ | 400 |
| 96 | 106-ರಾಜಕುಮಾರ್ | 300 |
| 97 | 107-ಶಿವ ನಗರ | 1600 |
| 98 | 108-ಶ್ರೀ ರಾಮಮಂದಿರ | 775 |
| 99 | 109-ಚಿಕ್ಕಪೇಟೆ | 128 |
| 100 | 110-ಸಂಪಗಿರಾಮ ನಗರ | 775 |
| 101 | 111-ಶಾಂತಲ ನಗರ | 335 |
| 102 | 112-ದೊಮ್ಮಲೂರು | 200 |
| 103 | 114-ಅಗರ | 295 |
| 104 | 115-ವಣ್ಣರ್ ಪೇಟೆ | 628 |
| 105 | 116-ನೀಲಸಂದ್ರ | 582 |
| 106 | 117-ಶಾಂತಿನಗರ | 420 |
| 107 | 118-ಸುಧಮ್ ನಗರ | 231 |
| 108 | 120-ಕಟ್ಟನ್ ಪೇಟೆ | 221 |
| 109 | 121-ಬಿನ್ನಿ ಪೇಟೆ | 412 |
| 110 | 123-ವಿಜಯ ನಗರ | 630 |
| 111 | 122-ಕೆಂಪಾಪುರ | 400 |
| 112 | 124-ಹೊಸಹಳ್ಳಿ | 420 |
| 113 | 125-ಮಾರೇನಹಳ್ಳಿ | 450 |
| 114 | 126-ಮಾರುತಿ ಮಂದಿರ | 450 |
| 115 | 127-ಮೂಡ್ಲ ಪಾಳ್ಯ | 762 |
| 116 | 128-ನಾಗರಭಾವಿ | 638 |
| 117 | 129-ಜನನಭಾರತಿ | 1602 |
| 118 | 130-ಉಲ್ಲಾಳು | 1410 |
| 119 | 131-ನಾಯಂಡನಹಳ್ಳಿ | 1000 |
| 120 | 132-ಅತ್ತಿಗುಪ್ಪೆ | 763 |
| 121 | 133-ಹಂಪಿನಗರ | 408 |
| 122 | 134-ಬಾಪುಜಿ ನಗರ | 538 |
| 123 | 135-ಪಾಡ್ಡರಾಯನಪುರ | 125 |
| 124 | 136-ಜಗಜೀವನರಾಮ್ ನಗರ | 355 |
| 125 | 137-ರೈಪುರ | 1070 |
| 126 | 138-ಚಲುವಡಿಪಾಳ್ಯ | 1100 |
| 127 | 139-ಕೆ ಆರ್ ಮಾರ್ಕೆಟ್ | 1100 |
| 128 | 140-ಚಾಮರಾಜ್ ಪೇಟೆ | 280 |
| 129 | 141-ಅಜದ್ ನಗರ | 950 |
| 130 | 142-ಸಂಕಿನಹಳ್ಳಿ | 950 |

| 131 | 143-ವಿ ವಿ ಪುರಂ | 450 |
|---|---|---|
| 132 | 144-ಚಿಕ್ಕಪೇಟೆ | 567 |
| 133 | 145-ಹೊಂಬೇಗೌಡನಗರ | 1823 |
| 134 | 146-ಲಕ್ಕಸಂದ್ರ | 50 |
| 135 | 148-ಈಜೀಪುರ | 556 |
| 136 | 149-ವರ್ತೂರು | 2204 |
| 137 | 150-ಬೆಳ್ಳಂದೂರು | 2307 |
| 138 | 151-ಕೋರಮಂಗಲ | 638 |
| 139 | 152-ಸದ್ದುಗುಂಟೆಪಾಳ್ಯ | 448 |
| 140 | 153-ಜಯನಗರ | 743 |
| 141 | 154-ಬಸವನಗುಡಿ | 1216 |
| 142 | 155-ಹನುಮಂತನಗರ | 886 |
| 143 | 156-ಶ್ರೀನಗರ | 746 |
| 144 | 157-ಗಾಳಿ ಆಂಜನೇಯ ದೇವಸ್ಥಾನ | 500 |
| 145 | 158-ದೀಪಾಂಜಲಿನಗರ | 400 |
| 146 | 159-ಕೇಂಗೇರಿ | 1779 |
| 147 | 160-ರಾಜ ರಾಜೇಶ್ವರಿ ನಗರ | 1071 |
| 148 | 161-ಹೊಸಕೆರಳ್ಳಿ | 850 |
| 149 | 162-ಗಿರಿನಗರ | 882 |
| 150 | 163-ಕತ್ರಿಗುಪ್ಪೆ | 776 |
| 151 | 164-ವಿದ್ಯಾಪೀಠ | 716 |
| 152 | 165-ಗಿರಿನಗರ | 705 |
| 153 | 166-ಕರಿ ಸಂದ್ರ | 817 |
| 154 | 167-ಯಡಿಯೂರು | 170 |
| 155 | 168-ಪಟ್ಟಾಭಿರಾಮ್ ನಗರ | 233 |
| 156 | 169-ಬೈರಸಂದ್ರ | 521 |
| 157 | 170-ಜಯನಗರ ಈಸ್ಟ್ | 297 |
| 158 | 171-ಗೊರಪ್ಪನಪಾಳ್ಯ | 950 |
| 159 | 173-ಜಕ್ಕಸಂದ್ರ | 1931 |
| 160 | 175-ಬೊಮ್ಮನಹಳ್ಳಿ | 222 |
| 161 | 176-ಬಿಟಿಎಂ ಲೇಔಟ್ | 50 |
| 162 | 177-ಜೆ ಪಿ ನಗರ | 2076 |
| 163 | 178-ಸರಕಿ | 50 |
| 164 | 179-ಶಕಂಭಾರಿ ನಗರ | 195 |
| 165 | 180- ಬನಶಂಕರಿ | 725 |
| 166 | 181-ಕುಮಾರ್ ಸ್ವಾಮಿಲೇಔಟ್ | 1005 |
| 167 | 182-ಪದ್ಮನಾಭನಗರ | 843 |
| 168 | 183-ಚಿಕ್ಕಲ್ಲಸಂದ್ರ | 727 |
| 169 | 184-ಉತ್ತರಹಳ್ಳಿ | 3211 |
| 170 | 185-ಯಲಚೇನಹಳ್ಳಿ | 240 |
| 171 | 186-ಜರಗನಹಳ್ಳಿ | 1478 |
| 172 | 187-ಪುಟ್ಟೇನಹಳ್ಳಿ | 267 |
| 173 | 188-ಬಿಳೇಕಲ್ಲಿ | 100 |
| 174 | 189-ಹೊಂಗಸಂದ್ರ | 2360 |
| 175 | 190-ಮಂಗಮ್ಮನಪಾಳ್ಯ | 657 |
| 176 | 191-ಸಿಂಗಸಂದ್ರ | 3538 |

| 177 | 192-ಬೇಗೂರು | 2853 |
|---|---|---|
| 178 | 192-ಹುಳಿಮಾವು | 152 |
| 179 | 193-ಅರೆಕೆರೆ | 500 |
| 180 | 194-ಗೊಟ್ಟಿಗೆರೆ | 940 |
| 181 | 195-ಕೋಣನಕುಂಟೆ | 746 |
| 182 | 196-ಅಂಜನಪುರ | 2232 |
| 183 | 197-ವಸಂತಪುರ | 898 |
| 184 | 198-ಹೆಂಪಿಗೆಪುರ | 2548 |
| 185 | ಡಿಸಿಪಿ-ಈಸ್ಟ್ ಜೋನ್ ಏರಿಯಾ (ಹೆಣ್ಣೂರು ಅಂಡ್ ರಾಮಮೂರ್ತಿ ನಗರ ಪೊಲೀಸ್ ಸ್ಟೇಷನ್ ಲಿಮಿಟ್ಸ್) | 1000 |
| 186 | ಡಿಸಿಪಿ-ವೈಟ್‌ಫೀಲ್ಡ್ (ವರ್ತೂರು ಪೊಲೀಸ್ ಸ್ಟೇಷನ್ ಲಿಮಿಟ್ಸ್) | 350 |
| 187 | ಬಿಬಿಎಂಪಿ ವೆಸ್ಟ್ ಜೋನ್ | 5000 |
| 188 | ಬಿಬಿಎಂಪಿ ಸೌತ್ ಜೋನ್ | 5000 |
| 189 | ಮಹಾದೇವಪುರ | 7752 |
| 190 | ಕನಕಪುರ ರೋಡ್ ಅಂಡ್ ಅದರ್ ಏರಿಯ | 4000 |
| | **ಬೆಂಗಳೂರು ಸೌತ್ ತಾಲ್ಲೂಕು** | |
| 191 | ಉತ್ತರಹಳ್ಳಿ ಹೋಬಳಿ | 7068 |
| 192 | ಕೆಂಗೇರಿ ಹೋಬಳಿ | 2150 |
| 93 | ಬೇಗೂರು ಹೋಬಳಿ | 4548 |
| 194 | ತಾವರೆಕೆರೆ ಹೋಬಳಿ | 2603 |
| | **ಬೆಂಗಳೂರು ನಾರ್ತ್ ತಾಲ್ಲೂಕು** | |
| 195 | ಜಾಲಹಳ್ಳಿ | 1865 |
| 196 | ದಾಸನಪುರ ಹೋಬಳಿ | 1614 |
| 197 | ಬಿಐಇಸಿ ತುಮಕೂರು ರೋಡ್ ಮಾದವಾರ ವಿಲೇಜ್ ದಾಸನಪುರ ಹೋಬಳಿ | 6447 |
| 198 | ಯಶವಂತಪುರ ಹೋಬಳಿ | 2500 |
| | **ಬೆಂಗಳೂರು ಈಸ್ಟ್ ತಾಲ್ಲೂಕು** | |
| 199 | ವರ್ತೂರು ಹೋಬಳಿ | 260 |
| 200 | ಬಿದರಹಳ್ಳಿ ಹೋಬಳಿ | 2889 |
| | **ಯಲಹಂಕ ತಾಲ್ಲೂಕು** | |
| 201 | ಯಲಹಂಕ ಹೋಬಳಿ | 1080 |
| 202 | ಹೆಸರಘಟ್ಟ ಹೋಬಳಿ | 700 |
| | **ಆನೇಕಲ್ ತಾಲ್ಲೂಕು** | |
| 203 | ಆನೇಕಲ್ ತಾಲ್ಲೂಕು | 16475 |
| | **ಬೆಂಗಳೂರು ಗ್ರಾಮಾಂತರ ಜಿಲ್ಲೆ** | |
| 204 | ನೆಲಮಂಗಲ ತಾಲ್ಲೂಕು | 3510 |
| 205 | ಹೊಸಕೋಟೆ ತಾಲ್ಲೂಕು | 150 |
| 206 | ದೊಡ್ಡಬಳ್ಳಾಪುರ ತಾಲ್ಲೂಕು | 3000 |
| 207 | ದೇವನಹಳ್ಳಿ ತಾಲ್ಲೂಕು ಮತ್ತು ಏರ್‌ಪೋರ್ಟ್ | 3400 |
| | **ರಾಮನಗರ ಜಿಲ್ಲೆ** | |
| 208 | ಕನಕಪುರ ತಾಲ್ಲೂಕು | 5000 |
| 209 | ಮಾಗಡಿ ತಾಲ್ಲೂಕು | 4000 |
| 210 | ರಾಮನಗರ ತಾಲ್ಲೂಕು | 5000 |
| 211 | ಚೆನ್ನಪಟ್ಟಣ | 5000 |
| | **ಚಿಕ್ಕಬಳ್ಳಾಪುರ ಜಿಲ್ಲೆ** | |

| | | |
|---|---|---|
| 212 | ಚಿಕ್ಕಬಳ್ಳಾಪುರ ತಾಲ್ಲೂಕು | 4000 |
| 213 | ಗೌರಿಬಿದನೂರು ತಾಲ್ಲೂಕು | 3000 |
| | **ಕೋಲಾರ ಜಿಲ್ಲೆ** | |
| 214 | ಮುಳಬಾಗಿಲು ತಾಲ್ಲೂಕು | 3025 |
| | **ತುಮಕೂರು ಜಿಲ್ಲೆ** | |
| 215 | ತುಮಕೂರು ತಾಲ್ಲೂಕು | 4253 |
| 216 | ಕೊರಟಗೆರೆ ತಾಲ್ಲೂಕು | 2122 |
| 217 | ಗುಬ್ಬಿ ತಾಲ್ಲೂಕು | 2000 |
| 218 | ಕುಣಿಗಲ್ ತಾಲ್ಲೂಕು | 3000 |
| 219 | ತಿಪಟೂರು ತಾಲ್ಲೂಕು | 3000 |
| 220 | ಪಾವಗಡ ತಾಲ್ಲೂಕು | 5000 |
| 221 | ತುರುವೇಕೆರೆ ತಾಲ್ಲೂಕು | 3000 |
| | **ಮಂಡ್ಯ ಜಿಲ್ಲೆ** | |
| 222 | ಮಳವಳ್ಳಿ ತಾಲ್ಲೂಕು | 5798 |
| 223 | ಪಾಂಡವಪುರ ತಾಲ್ಲೂಕು | 3000 |
| | **ಹಾಸನ ಜಿಲ್ಲೆ** | |
| 224 | ಅರಸೀಕೆರೆ ತಾಲ್ಲೂಕು | 9000 |
| 225 | ಹಾಸನ ಟೌನ್ | 3000 |
| 226 | ಅರಕಲಗೂಡು | 3000 |
| 227 | ಹೊಳೆನರಸಿಪುರ | 6000 |
| 228 | ಚೆನ್ನರಾಯಪಟ್ಟಣ | 3000 |
| 229 | ಬೇಲೂರು | 3000 |
| | **ಉಡುಪಿ ಜಿಲ್ಲೆ** | |
| 230 | ಕಾರ್ಕಳ ತಾಲ್ಲೂಕು | 5000 |
| | **ಬೆಳಗಾವಿ ಜಿಲ್ಲೆ** | |
| 232 | ಬೆಳಗಾವಿ ತಾಲ್ಲೂಕು | 31000 |
| 233 | ಖಾನಾಪುರ ತಾಲ್ಲೂಕು | 5000 |
| 234 | ನಿಪ್ಪಾಣಿ ತಾಲ್ಲೂಕು | 10000 |
| 235 | ರಾಯಭಾಗ ತಾಲ್ಲೂಕು | 3500 |
| 236 | ರಾಮದುರ್ಗ ತಾಲ್ಲೂಕು | 500 |
| 237 | ಹುಕ್ಕೇರಿ ತಾಲ್ಲೂಕು | 4000 |
| 238 | ಕಿತ್ತೂರು | 3000 |
| 239 | ಕುಡಚಿ | 5000 |
| | **ಧಾರವಾಡ ಜಿಲ್ಲೆ** | |
| 240 | ಧಾರವಾಡ | 9500 |
| 241 | ಕಲಘಟಗಿ ತಾಲ್ಲೂಕು | 4000 |
| 242 | ಹುಬ್ಬಳ್ಳಿ ಧಾರವಾಡ ಪಶ್ಚಿಮ | 4000 |
| 243 | ಹುಬ್ಬಳ್ಳಿ ನಗರ (ಕೇಂದ್ರ) | 6000 |
| 244 | ಹುಬ್ಬಳ್ಳಿ ಧಾರವಾಡ ಪೂರ್ವ | 4000 |
| | **ಉತ್ತರ ಕನ್ನಡ ಜಿಲ್ಲೆ** | |
| 245 | ಹಳಿಯಾಳ ತಾಲ್ಲೂಕು | 7000 |
| 246 | ಕಾರವಾರ ತಾಲ್ಲೂಕು | 3000 |
| 247 | ಕುಮಟಾ ತಾಲ್ಲೂಕು | 5000 |
| 248 | ಭಟ್ಕಳ ತಾಲ್ಲೂಕು | 4000 |
| 249 | ಶಿರಸಿ ತಾಲ್ಲೂಕು | 5000 |
| | **ಹಾವೇರಿ ಜಿಲ್ಲೆ** | |

| | | |
|---|---|---|
| 250 | ಶಿಂಗಾನ್ | 6000 |
| 251 | ಹಾವೇರಿ | 4000 |
| 252 | ಹಿರೇಕೆರೂರು | 8500 |
| 253 | ಬ್ಯಾಡಗಿ | 3000 |
| 254 | ರಾಣೆಬೆನ್ನೂರು | 6000 |
| 255 | ಹಾನಗಲ್ | 3000 |
| | **ದಾವಣಗೆರೆ ಜಿಲ್ಲೆ** | |
| 266 | ದಾವಣಗೆರೆ ತಾಲ್ಲೂಕು | 5000 |
| | **ಚಿತ್ರದುರ್ಗ ಜಿಲ್ಲೆ** | |
| 267 | ಚಿತ್ರದುರ್ಗ ತಾಲ್ಲುಕು | 4000 |
| 268 | ಹಿರಿಯೂರು ತಾಲ್ಲೂಕು | 6000 |
| | **ಕಲಬುರಗಿ ಜಿಲ್ಲೆ** | |
| 269 | ಕಲಬುರಗಿ ತಾಲ್ಲೂಕು | 11000 |
| 270 | ಆಳಂದ | 3000 |
| 271 | ಚಿತ್ತಾಪುರ | 3000 |
| | **ಕೊಪ್ಪಳ ಜಿಲ್ಲೆ** | |
| 272 | ಕೊಪ್ಪಳ ತಾಲ್ಲೂಕು | 9000 |
| 273 | ಗಂಗಾವತಿ | 3000 |
| | **ಚಾಮರಾಜನಗರ ಜಿಲ್ಲೆ** | |
| 274 | ಕೊಳ್ಳೆಗಾಲ | 5000 |
| | **ರಾಯಚೂರು ಜಿಲ್ಲೆ** | |
| 275 | ರಾಯಚೂರು ತಾಲ್ಲೂಕು | 3000 |
| | **ಬೀದರ್ ಜಿಲ್ಲೆ** | |
| 276 | ಬಾಲ್ಕಿ | 4000 |
| | **ಯಾದಗಿರಿ ಜಿಲ್ಲೆ** | |
| 277 | ಯಾದಗಿರಿ ತಾಲ್ಲೂಕು | 3000 |
| | **ಗದಗ ಜಿಲ್ಲೆ** | |
| 278 | ಗದಗ ತಾಲ್ಲೂಕು | 3000 |
| 279 | ಗಜೇಂದ್ರಗಢ | 3000 |
| 280 | ನರಗುಂದ | 3000 |
| 281 | ಲಕ್ಷ್ಮೇಶ್ವರ | 3000 |
| | ಒಟ್ಟು | 5,61,000 |

## ಟ್ರೇಡ್ ಯೂನಿಯನ್‌ಗಳಿಗೆ ವಿತರಿಸಿದ ಡ್ರೈ ಫುಡ್ ಕಿಟ್‌ಗಳ ವಿವರ

| ಕ್ರ.ಸಂ | ಯೂನಿಯನ್ ಹೆಸರು ಮತ್ತು ಪ್ರತಿನಿಧಿ | ವಿತರಿಸಿದ ಕಿಟ್‌ಗಳ ಸಂಖ್ಯೆ |
|---|---|---|
| 01 | INTUC-Shamanna Reddy | 8800 |
| 02 | CITU-Pratap Simha | 8800 |
| 03 | NCL-Leelavati S | 4000 |
| 04 | AITUC-Muniraju | 4000 |
| 05 | HMS-Naganath | 4000 |
| 06 | AICCTU P P Appanna | 4000 |
| 07 | AIUTUC G Hanumesh | 2400 |
| 08 | HMKP Kalappa | 1600 |
| 09 | TUCC M Z Ali | 1600 |
| 10 | GATWU Jayaramu | 800 |
| 11 | 1 Sri Byrathi Basavaraju-1000<br>2. Sri Padmanabha Reddy BBMP corporator Kacharakanahalli ward 3000 | 4000 |
| 12 | BMS Organisation-4000<br>Cinema Workers Okkuta-1500 | 5500 |
| 13 | Mahalakshmipuram ward through SLI_1 (Sri Kuvempu Samskritika and Samajika Vedike) | 500 |
| | ಒಟ್ಟು | **50000** |

| ಕ್ರ.ಸಂ | ಕಿಟ್ ಹಂಚಿಕೆ ಮಾಡಿದ ಇಲಾಖೆ | ಕಿಟ್‌ಗಳ ಸಂಖ್ಯೆ |
|---|---|---|
| 1 | ಕಾರ್ಮಿಕ ಇಲಾಖೆ ಅಧಿಕಾರಿಗಳು | 609000 |
| 2 | ಬಿಬಿಎಂಪಿ ಇಲಾಖೆ | 79519 |
| 3 | ಜಿಲ್ಲಾಧಿಕಾರಿಗಳ ಕಛೇರಿ ಬೆಂಗಳೂರು ನಗರ | 21606 |
| 4 | ಜಿಲ್ಲಾಧಿಕಾರಿಗಳ ಕಛೇರಿ ಬೆಂಗಳೂರು ಗ್ರಾಮಾಂತರ | 4875 |
| | ಒಟ್ಟು | 715000 |

**ಕರ್ನಾಟಕ ಸರ್ಕಾರ**

ಸಂಖ್ಯೆ: ಕಾಇ 139 ಎಲ್‌ಇಟಿ 2021

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸಸೌಧ,
ಬೆಂಗಳೂರು, ದಿನಾಂಕ: 20 /04/2021

**ಇವರಿಂದ:**
ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ,
ಕಾರ್ಮಿಕ ಇಲಾಖೆ,
ವಿಕಾಸಸೌಧ, ಬೆಂಗಳೂರು.

**ಇವರಿಗೆ:**
ಕಾರ್ಯದರ್ಶಿ,
ಕರ್ನಾಟಕ ವಿಧಾನ ಸಭೆ
ವಿಧಾನಸೌಧ, ಬೆಂಗಳೂರು.

ಮಾನ್ಯರೆ,

ವಿಷಯ: ಮಾನ್ಯ ವಿಧಾನ ಸಭೆಯ ಸದಸ್ಯರಾದ ಶ್ರೀ ಎಸ್.ಎನ್. ನಾರಾಯಣಸ್ವಾಮಿ ಕೆ.ಎಂ. (ಬಂಗಾರಪೇಟೆ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 3668ಕ್ಕೆ ಉತ್ತರ ಸಲ್ಲಿಸುವ ಕುರಿತು.

*******

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನ ಸಭೆಯ ಸದಸ್ಯರಾದ ಶ್ರೀ ಎಸ್.ಎನ್. ನಾರಾಯಣಸ್ವಾಮಿ ಕೆ.ಎಂ. (ಬಂಗಾರಪೇಟೆ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 3668ಕ್ಕೆ ಉತ್ತರದ 20 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಮುಂದಿನ ಸೂಕ್ತ ಕ್ರಮಕ್ಕಾಗಿ ತಮಗೆ ಕಳುಹಿಸಿಕೊಡಲು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮ ವಿಶ್ವಾಸಿ,

*(ಪ್ರದೀಪ್ ಕುಮಾರ್ ಬಿ.ಎಸ್)*
ಸರ್ಕಾರದ ಅಧೀನ ಕಾರ್ಯದರ್ಶಿ,
ಕಾರ್ಮಿಕ ಇಲಾಖೆ.

# ಕರ್ನಾಟಕ ವಿಧಾನ ಸಭೆ

| | | |
|---|---|---|
| 1. | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 3668 |
| 2. | ಮಾನ್ಯ ಸದಸ್ಯರ ಹೆಸರು | ಶ್ರೀ ಎಸ್.ಎನ್. ನಾರಾಯಣಸ್ವಾಮಿ ಕೆ.ಎಂ. (ಬಂಗಾರಪೇಟೆ) |
| 3. | ಉತ್ತರಿಸಬೇಕಾದ ದಿನಾಂಕ | 25/03/2021 |
| 4. | ಉತ್ತರಿಸುವವರು | ಮಾನ್ಯ ಕಾರ್ಮಿಕ ಸಚಿವರು |

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಕೋಲಾರ ಜಿಲ್ಲೆಯಲ್ಲಿ ನೋಂದಾಯಿಸಲಾದ ಕೂಲಿ ಕಾರ್ಮಿಕರ ಸಂಘಗಳ ಸಂಖ್ಯೆ ಎಷ್ಟು; ಅವು ಯಾವುವು; (ಹೆಸರುಗಳ ಸಹಿತ ವಿವರಗಳನ್ನು ನೀಡುವುದು) | ಕೋಲಾರ ಜಿಲ್ಲೆಯಲ್ಲಿ ಕಾರ್ಮಿಕ ಸಂಘಗಳ ಕಾಯ್ದೆಯಡಿ ಒಟ್ಟು 30 ಕೂಲಿ ಕಾರ್ಮಿಕರ ಸಂಘಗಳು ನೊಂದಾಯಿಸಲ್ಪಟ್ಟಿವೆ. ಈ ವಿವರಗಳನ್ನು <u>ಅನುಬಂಧ</u> ದಲ್ಲಿ ಲಗತ್ತಿಸಿದೆ. |
| ಆ) | ಈ ಸಂಘಗಳಲ್ಲಿ ನೋಂದಾಯಿಸಿಕೊಂಡ ಕಾರ್ಮಿಕರ ಸಂಖ್ಯೆ ಎಷ್ಟು; ಹೆಸರು ನೋಂದಾಣಿಗಾಗಿ ನಿಗದಿಪಡಿಸಿದ ನೋಂದಣಿ ಶುಲ್ಕ ಎಷ್ಟು; | ನೊಂದಾಯಿತವಾದ ಈ 30 ಕಾರ್ಮಿಕ ಸಂಘಗಳಲ್ಲಿ ಒಟ್ಟು 3769 ಕಾರ್ಮಿಕರು ಸದಸ್ಯರಿರುತ್ತಾರೆ. ವಿವರಗಳನ್ನು <u>ಅನುಬಂಧ</u> ದಲ್ಲಿ ಒದಗಿಸಿದೆ.<br>ಕಾರ್ಮಿಕ ಸಂಘಗಳ ಕಾಯ್ದೆಯಡಿ 2018ರ ಪೂರ್ವದಲ್ಲಿ ಕಾರ್ಮಿಕ ಸಂಘಗಳ ನೊಂದಣಿ ಶುಲ್ಕ ರೂ. 10/- ಇದ್ದು, ಪ್ರಸ್ತುತ ನೊಂದಣಿ ಪ್ರಕ್ರಯೆಯು ಆನ್‌ಲೈನ್ ಮೂಲಕ ನಡೆಯುತ್ತಿದ್ದು, ಪ್ರತಿ ಕಾರ್ಮಿಕ ಸಂಘಗಳ ನೊಂದಣಿ ಶುಲ್ಕ ರೂ. 1,000/- ಇರುತ್ತದೆ. |
| ಇ) | ಕಾರ್ಮಿಕರ ಪರವಾಗಿ ಗುತ್ತಿಗೆದಾರರು ಸರ್ಕಾರಕ್ಕೆ ಪಾವತಿಸಿರುವ ಮೊತ್ತ ಎಷ್ಟು; | ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಸುಂಕ ಕಾಯ್ದೆಯಡಿ ನಿರ್ಮಾಣದಾರರು ಮಂಡಳಿಗೆ ಪಾವತಿಸಿರುವ ಸುಂಕದ ಮೊತ್ತವು ಒಟ್ಟು ರೂ.14,76,73,654/- ಆಗಿರುತ್ತದೆ. |
| ಈ) | ಕಳೆದ 5 ವರ್ಷಗಳ ಅವಧಿಯಲ್ಲಿ ಎಷ್ಟು ಮಂದಿ ಕಾರ್ಮಿಕರಿಗೆ ಮತ್ತು ಮಕ್ಕಳಿಗೆ ವಿದ್ಯಾಭ್ಯಾಸಕ್ಕಾಗಿ, ಮದುವೆ, ಆರೋಗ್ಯ ಇತ್ಯಾದಿ ಪ್ರಕರಣಗಳಿಗೆ ಪರಿಹಾರ/ ಸಹಾಯಧನ ವಿತರಿಸಲಾಗಿದೆ? (ಸಂಪೂರ್ಣ ವಿವರಗಳನ್ನು ನೀಡುವುದು) | ಕಳೆದ 5 ವರ್ಷಗಳಲ್ಲಿ ಇಲಾಖೆಯ ವ್ಯಾಪ್ತಿಯಲ್ಲಿ ಬರುವ ವಿವಿಧ ಮಂಡಳಿಗಳಿಂದ ನೀಡಿರುವ ಸೌಲಭ್ಯಗಳ ವಿವರಗಳು ಈ ಕೆಳಕಂಡಂತಿವೆ.<br><u>1) ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿ:- ಈ ಮಂಡಳಿಯ</u> ವತಿಯಿಂದ ಕಳೆದ 5 ವರ್ಷಗಳ ಅವಧಿಯಲ್ಲಿ ಕೋಲಾರ ಜಿಲ್ಲಾ ವ್ಯಾಪ್ತಿಯ 24,719 ನೋಂದಾಯಿತ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರಿಗೆ ವಿವಿಧ ಸೌಲಭ್ಯಗಳಡಿ ಸಹಾಯಧನವನ್ನು ವಿತರಣೆ ಮಾಡಲಾಗಿರುತ್ತದೆ. ಅದರ ವಿವರಗಳು ಈ ಕೆಳಕಂಡಂತಿವೆ. |

| ಕ್ರ ಸಂ. | ಸೌಲಭ್ಯ | ಫಲಾನುಭವಿಗಳ ಸಂಖ್ಯೆ | ಮಂಜೂರಾದ ಮೊತ್ತ |
|---|---|---|---|
| 1 | ಶೈಕ್ಷಣಿಕ ಧನ ಸಹಾಯ | 22,231 | 14,64,17,203/- |
| 2 | ಮದುವೆ ಸಹಾಯಧನ | 1,392 | 6,96,00,000/- |

| 3 | ವೈದ್ಯಕೀಯ ಸಹಾಯಧನ | 04 | 4,838/- |
|---|---|---|---|
| 4 | ಹೆರಿಗೆ ಸಹಾಯಧನ | 370 | 79,15,000/- |
| 5 | ಪ್ರಮುಖ ವೈದ್ಯಕೀಯ ಧನಸಹಾಯ | 160 | 54,09,477/- |
| 6 | ಅಂತ್ಯಕ್ರಿಯ ವೆಚ್ಚ ಹಾಗೂ ಅನುಗ್ರಹ ರಾಶಿ | 560 | 3,09,76,000/- |
| 7 | ಅಪಘಾತ ಮರಣ | 02 | 5,00,000/- |
| | ಒಟ್ಟು | 24,719 | 26,08,22,518/- |

**2) ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿ;-** ಈ ಮಂಡಳಿಯ ವತಿಯಿಂದ ಜಾರಿಗೊಳಿಸುತ್ತಿರುವ, **"ಕರ್ನಾಟಕ ರಾಜ್ಯ ಖಾಸಗಿ ವಾಣಿಜ್ಯ ಸಾರಿಗೆ ಕಾರ್ಮಿಕರ ಅಪಘಾತ ಪರಿಹಾರ ಯೋಜನೆ"**ಯಡಿ, ಖಾಸಗಿ ವಾಣಿಜ್ಯ ಸಾರಿಗೆ ವಾಹನ ಚಾಲಕರು, ನಿರ್ವಾಹಕರು ಹಾಗೂ ಕ್ಲೀನರ್‌ಗಳಿಗೆ ಈ ಕೆಳಕಂಡ ಸೌಲಭ್ಯಗಳನ್ನು ನೀಡಲಾಗುತ್ತಿದ್ದು, ವಿವರ ಕೆಳಗಿನಂತಿದೆ:

**ಅ) ಅಪಘಾತ ಪರಿಹಾರ:-**

ಸಾರಿಗೆ ಇಲಾಖೆಯಿಂದ ಖಾಸಗಿ ವಾಣಿಜ್ಯ ಸಾರಿಗೆ ವಾಹನ ಚಲಾಯಿಸಲು ಊರ್ಜಿತ ಚಾಲನಾ ಪ್ರಮಾಣಪತ್ರ ಹೊಂದಿದ ಚಾಲಕರು ಅಪಘಾತದಿಂದ ನಿಧನರಾದಲ್ಲಿ ನಾಮನಿರ್ದೇಶಿತರಿಗೆ ರೂ. 5.00 ಲಕ್ಷ, ಶಾಶ್ವತ ದುರ್ಬಲತೆ ಪ್ರಕರಣಗಳಲ್ಲಿ ಶೇಕಡಾವಾರು ದುರ್ಬಲತೆಯ ಆಧಾರದ ಮೇಲೆ ರೂ.2.00 ಲಕ್ಷಗಳವರೆಗೆ ಹಾಗೂ ತಾತ್ಕಾಲಿಕ ದುರ್ಬಲತೆಯ ಪ್ರಕರಣಗಳಲ್ಲಿ ರೂ.1.00 ಲಕ್ಷದವರೆಗೆ ಫಲಾನುಭವಿಗೆ ಅಪಘಾತ ಪರಿಹಾರ ನೀಡಲಾಗುತ್ತಿದ್ದು, ಕಳೆದ 5 ವರ್ಷಗಳ ಅವಧಿಯ ವಿವರ ಈ ಕೆಳಗಿನಂತಿದೆ:

| ವರ್ಷ | ಪ್ರಕರಣಗಳ ಸಂಖ್ಯೆ | ಅಪಘಾತ ಪರಿಹಾರದ ಮೊತ್ತ |
|---|---|---|
| 2016-17 | 2 | Rs.2,50,000 |
| 2017-18 | 2 | Rs.4,00,000 |
| 2018-19 | - | - |
| 2019-20 | 4 | Rs.20,00,000 |
| 2020-21 | 3 | Rs.15,00,000 |
| ಒಟ್ಟು | 11 | **Rs.41,50,000** |

**ಆ) ಶೈಕ್ಷಣಿಕ ಧನಸಹಾಯ:-**

ಅಪಘಾತದಿಂದ ನಿಧನರಾದ ಹಾಗೂ ಸಂಪೂರ್ಣ ಶಾಶ್ವತ ದುರ್ಬಲತೆ ಹೊಂದಿದ ಖಾಸಗೀ ವಾಣಿಜ್ಯ ಸಾರಿಗೆ ವಾಹನ ಚಾಲಕರ ಇಬ್ಬರು ಮಕ್ಕಳಿಗೆ ಒಂದನೇ ತರಗತಿಯಿಂದ ಪದವಿ ಪೂರ್ವ/12ನೇ ತರಗತಿಯವರೆಗೆ ವ್ಯಾಸಂಗ ಮಾಡಲು ವಾರ್ಷಿಕ ತಲಾ ರೂ.10,000/-ಗಳ

"ಶೈಕ್ಷಣಿಕ ಧನಸಹಾಯ" ನೀಡಲಾಗುತ್ತಿದ್ದು, ಈ ಸೌಲಭ್ಯವನ್ನು 2018–19ನೇ ಸಾಲಿನಿಂದ ಜಾರಿಗೆ ತರಲಾಗಿದೆ. ಸದರಿ ಅವಧಿಯಲ್ಲಿ ವಿತರಿಸಿದ ಶೈಕ್ಷಣಿಕ ಧನಸಹಾಯದ ವಿವರ ಈ ಕೆಳಗಿನಂತಿದೆ:

| ವರ್ಷ | ಫಲಾನುಭವಿ ವಿದ್ಯಾರ್ಥಿಗಳ ಸಂಖ್ಯೆ | ವಿತರಿಸಿದ ಶೈಕ್ಷಣಿಕ ಧನಸಹಾಯ |
|---|---|---|
| 2018–19 | 3 | ರೂ.30,000 |
| 2019–20 | 4 | ರೂ.40,000 |
| 2020–21 | 2 (ಫೆಬ್ರವರಿ 2021ರ ಅಂತ್ಯದ ವರೆಗೆ) | ರೂ.20,000 |
| **ಒಟ್ಟು** | **9** | **ರೂ.90,000** |

**3) <u>ಕರ್ನಾಟಕ ಕಾರ್ಮಿಕ ಕಲ್ಯಾಣ ಮಂಡಳಿ</u>:–** ಈ ಮಂಡಳಿಯಿಂದ ಕಳೆದ 5 ವರ್ಷಗಳಿಂದ ಕೋಲಾರ ಜಿಲ್ಲೆಯ ಸಂಘಟಿತ ಕಾರ್ಮಿಕರ ಮಕ್ಕಳ ವಿದ್ಯಾಭ್ಯಾಸಕ್ಕಾಗಿ ಮಂಡಳಿಯಿಂದ ಶೈಕ್ಷಣಿಕ ಪ್ರೋತ್ಸಾಹ ಧನ ಸಹಾಯ ನೀಡಿರುವ ವಿವರ ಈ ಕೆಳಕಂಡಂತಿದೆ.

| ಕ್ರಸಂ | ವರ್ಷ | ಫಲಾನುಭವಿಗಳ ಸಂಖ್ಯೆ | ಮೊತ್ತ |
|---|---|---|---|
| 1 | 2015–16 | 56 | 94,200 |
| 2 | 2016–17 | 8 | 15,200 |
| 3 | 2017–18 | 66 | 2,42,000 |
| 4 | 2018–19 | 127 | 4,70,000 |
| 5 | 2019–20 | 631 | 24,90,000 |
| | **ಒಟ್ಟು** | **888** | **33,11,400** |

**ಕಾಇ 139 ಎಲ್‌ಇಟಿ 2021**

(ಅರಬೈಲ್ ಶಿವರಾಂ ಹೆಬ್ಬಾರ್)
**ಕಾರ್ಮಿಕ ಸಚಿವರು**

# ಅನುಬಂಧ

**ಸಹಾಯಕ ಕಾರ್ಮಿಕ ಆಯುಕ್ತರು, ವಿಭಾಗ-3, ಬೆಂಗಳೂರು ಇವರ ಕಛೇರಿಯಲ್ಲಿ ವೃತ್ತಿ ಸಂಘಗಳ ಕಾಯ್ದೆ 1926ರ ಅಡಿಯಲ್ಲಿ ನೊಂದಣಿಯಾದ ಸಂಘಗಳ ಪಟ್ಟಿ**

ಕೋಲಾರ ಜಿಲ್ಲೆ

| ಕ್ರಮ ಸಂಖ್ಯೆ | ನೋಂದಣಿ ಸಂಖ್ಯೆ | ಕಾರ್ಮಿಕ ಸಂಘದ ವಿಳಾಸ | ನೋಂದಣಿ ದಿನಾಂಕ | ನೋಂದಣಿ ಶುಲ್ಕ | ಕಾರ್ಮಿಕರ ಸಂಖ್ಯೆ |
|---|---|---|---|---|---|
| 1 | ಸಕಾಆಬೆಂ-3/ಟಿಯುಎ-5/11-12 | ಕೋಲಾರ ಡಿಸ್ಟ್ರಿಕ್ಟ್ ಅಣ್ಣಾ ಕನ್‌ಸ್ಟ್ರಕ್ಷನ್ ವರ್ಕರ್ಸ್ ಯೂನಿಯನ್, ಕೆ.ಜಿ.ಎಫ್ | 12/15/2011 | 10 | 120 |
| 2 | ಎಎಲ್‌ಸಿಬಿ-03/ಟಿಯುಎ/ಸಿಆರ್-15/07-08 | ಕೋಲಾರ ಜಿಲ್ಲಾ ಕಟ್ಟಡ ಕಾರ್ಮಿಕರ ಸಂಘ, ಕೋಲಾರ | 12/17/2007 | 10 | 125 |
| 3 | ಸಕಾಆಬೆಂ-3/ಟಿಯುಎ-5/08-09 | ಹಮಾಲಿ ಕೂಲಿ ಕಾರ್ಮಿಕರ ಸಂಘ, ಮುಳಬಾಗಿಲು. | 1/7/2009 | 10 | 130 |
| 4 | ಸಕಾಆಬೆಂ-3/ಟಿಯುಎ-7/08-09 | ಕರ್ನಾಟಕ ರಾಜ್ಯ ಕಟ್ಟಡ ನಿರ್ಮಾಣ ಕಾರ್ಮಿಕರ ಸಂಘ ಮುಳಬಾಗಿಲು. | 2/18/2009 | 10 | 121 |
| 5 | ಸ:ಟಿಯುಎ-16/09-10 | ಕೋಲಾರ ಜಿಲ್ಲಾ ಹಮಾಲರ ಸಂಘ, ಕೋಲಾರ | 12/14/2009 | 10 | 122 |
| 6 | ಸ:ಟಿಯುಎ-19/09-10 | ಕೋಲಾರ ಕೂಲಿ ಕಾರ್ಮಿಕರ ಸಂಘ ಕೋಲಾರ. | 3/17/2010 | 10 | 125 |
| 7 | ಡಿಆರ್‌ಟಿ/ಬಿ-3/ ಟಿಯುಎ/ಸಿಆರ್-15/94-95 | ಬಂಗಾರಪೇಟೆ ತಾಲ್ಲೂಕು ಕಟ್ಟಡ ನಿರ್ಮಾಣ ಕಾರ್ಮಿಕರ ಸಂಘ | 3/23/1995 | 10 | 130 |
| 8 | ಸಕಾಆಬೆಂ-2/ಟಿಯುಎ/ಸಿಆರ್-26/04-05 | ಕೆ.ಜಿ.ಎಫ್ ಪೀಪಲ್ಸ್ ಮೊಮೆಂಟ್ ಅಸಂಘಟಿತ ಕ್ಷೇತ್ರ ಕಾರ್ಮಿಕ ಯೂನಿಯನ್ (ರಿ), ಕೆ.ಜಿ.ಎಫ್-563113 | - | 10 | 125 |
| 9 | ಸಕಾಆಬೆಂ-2/ಟಿಯುಎ/ಸಿಆರ್-11/11-12 | ದಿ ಕೋಲಾರ ಜಿಲ್ಲಾ ಕಟ್ಟಡ ಕಾರ್ಮಿಕರ ಕ್ಷೇಮಾಭಿವೃದ್ಧಿ ಯೂನಿಯನ್ 291,2ನೇ ಮುಖ್ಯ ರಸ್ತೆ, ಕೋಟೆ, ಕೋಲಾರ-01 | 1/28/2012 | 10 | 128 |

| | | | | | |
|---|---|---|---|---|---|
| 10 | ಸಕಾಬೆಂ–3/ಟಿಯುಎ/ಸಿಆರ್–01/12–13 | ಶ್ರೀಮತಿ.ಇಂದಿರಾ ಗಾಂಧಿ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಸಂಘ, ಬಿ.ಎಂ.ರಸ್ತೆ, ಗೋಲ್ಡ್‌ಫಿಲ್ಡ್ ಹೋಟೆಲ್ ರಾಬರ್ಟ್‌ಸನ್ ಪೇಟೆ, ಕೆ.ಜಿ.ಎಫ್. | 4/17/2012 | 10 | 123 |
| 11 | ಸಕಾಬೆಂ–3/ಟಿಯುಎ/ಸಿಆರ್–04/12–13 | "ಕೋಲಾರ ಜಿಲ್ಲೆ ಡಾ. ಬಾಬಾ ಸಾಹೇಬ್ ಅಂಬೇಡ್ಕರ್ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಸಂಘ",ಹುಲ್ಲು ಮಾರ್ಕೆಟ್, 2ನೇ ಎಂ.ಜಿ. ಮಾರ್ಕೆಟ್, ರಾಬರ್ಟ್‌ಸನ್ ಪೇಟೆ ಅಂಚೆ, ಕೆ.ಜಿ.ಎಫ್. | 12/24/2012 | 10 | 121 |
| 12 | ಸಕಾಬೆಂ–3/ಟಿಯುಎ/ಸಿಆರ್–05/12–13 | "ಭಗತ್ ಸಿಂಗ್ ಕೂಲಿ ಕಾರ್ಮಿಕರ ಸಂಘ"ಬಿ.ಬಿ.ಎಂ. ವಿದ್ಯಾರ್ಥಿ ನಿಲಯ ಮುಂಭಾಗ, ಮಾಲೂರು ತಾಲ್ಲೂಕು. | 1/8/2013 | 10 | 122 |
| 13 | ಸಕಾಆಬೆಂ–3/ಟಿಯುಎ/ಸಿಆರ್–05/2015–16 | ವಿನೋದ್ ಕಟ್ಟಡ ನಿರ್ಮಾಣ ಕಾರ್ಮಿಕರ ಸಂಘ, ಗುಟ್ಟೂರು ಗ್ರಾಮ, ಹುತ್ತೂರು ಅಂಚೆ & ಹೋಬಳಿ, ಕೋಲಾರ ತಾಲ್ಲೂಕು ಮತ್ತು ಜಿಲ್ಲೆ | 5/18/2015 | 10 | 125 |
| 14 | ಸಕಾಆಬೆಂ–3/ಟಿಯುಎ/ಸಿಆರ್–07/2015–16 | ಅಬ್ದುಲ್ ಕಲಾಂ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಸಂಘ ರಾಜನಗರ, ಕೋಲಾರ, ಕೋಲಾರ ಜಿಲ್ಲೆ–563101 | 12/10/2015 | 10 | 126 |
| 15 | ಸಕಾಆಬೆಂ–3/ಟಿಯುಎ/ಸಿಆರ್–08/2015–16 | ಚಂದ್ರಶೇಖರ್ ಆಜ಼ಾದ್ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಸಂಘ: ಹಳೇ ಅಂಚೆ ಕಛೇರಿ ರಸ್ತೆ, ಅಮ್ಮವಾರಪೇಟೆ, ಕೋಲಾರ ಜಿಲ್ಲೆ–101 | 1/13/2016 | 10 | 130 |
| 16 | ಸಕಾಆಬೆಂ–3/ಟಿಯುಎ–289/18–19 | ಬಂಗಾರಪೇಟೆ ತಾಲ್ಲೂಕು ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಸಂಘ ಶ್ರೀ ಕೃಷ್ಣಪ್ಪ ಕಾಂಪ್ಲೆಕ್ಸ್ 3ನೇ ಮಹಡಿ ವಿವೇಕಾನಗರ ಬಸ್ ನಿಲ್ದಾಣ ಹತ್ತಿರ ಬಂಗಾರಪೇಟೆ | 8/13/2018 | 1000 | 132 |

